KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮಾರ್ಚ್ ೩೦, ೨೦೦೬ (ಚೈತ್ರ ೯, ಶಕ ವರ್ಷ ೧೯೨೮) | ಸಂಚಿಕೆ ೧೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಸುಂದರ್ ಕೊರಳಿಕರ್, ನಿವೃತ್ತ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ, ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ಬದಲಾವಣೆ ಬಗ್ಗೆ ಆದೇಶ.

**ಓದಲಾಗಿದೆ:** 1) ಅಧಿಕೃತ ಜ್ಞಾಪನಾ ಸಂ:ಇಡಿ 44 ಡಿಜಿಡಿ 2002 (ಭಾಗ) ದಿ:15.6.2004
2) ಶ್ರೀ ಸುಂದರ್ ಕೊರಳಿಕರ್ ಇವರ ಪ್ರತಿ ರಕ್ಷಣಾ ಹೇಳಿಕೆ ದಿ:24.8.2004
3) ಸರ್ಕಾರಿ ಆದೇಶ ಸಂ: ಇಡಿ 44 ಡಿಜಿಡಿ 2002(ಭಾಗ) ದಿ:7.10.2004

**ಪ್ರಸ್ತಾವನೆ:**

ಶ್ರೀ ಸುಂದರ್ ಕೊರಳಿಕರ್ ನಿವೃತ್ತ ಜಿಲ್ಲಾ ದೈಹಿಕ ಅಧೀಕ್ಷಕರು, ಉಪನಿರ್ದೇಶಕರ ಕಚೇರಿ, ಗುಲ್ಬರ್ಗ, ಇವರು ಸೇವೆಯಿಂದ ದಿ:31.12.2000 ರಂದು ನಿವೃತ್ತಿ ಹೊಂದಿದ್ದು, ನಿವೃತ್ತಿ ಹೊಂದುವ ಮೊದಲು ದೈಹಿಕ ಶಿಕ್ಷಣ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕ್ರೀಡಾ ತರಬೇತಿ ಹಾಗೂ ಇತರೆ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ಇದ್ದ ಹಣಕಾಸಿನ ವೆಚ್ಚಗಳ ದಾಖಲಾತಿಗಳು:ಲೆಕ್ಕಪತ್ರಗಳನ್ನು ತದನಂತರ ಬಂದ ಉತ್ತರಾಧಿಕಾರಿಯವರಿಗಾಗಲೀ ಅಥವಾ ಗುಲ್ಬರ್ಗಾ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖಾ ಉಪ ನಿರ್ದೇಶಕರಿಗಾಗಲೀ ಹಸ್ತಾಂತರಿಸದೆ ಕ್ರೀಡಾ ಕ್ರಮಗಳಿಗೆ ಬಿಡುಗಡೆಗೊಳಿಸಲಾಗಿದ್ದ ಹಣವನ್ನು ದುರುಪಯೋಗಪಡಿಸಿಕೊಳ್ಳಲು ಕಾರಣರಾಗಿರುವುದು ದಾಖಲೆಗಳಿಂದ ಮೇಲ್ನೋಟಕ್ಕೆ ನಿಜವೆಂದು ಕಂಡುಬಂದ ಹಿನ್ನಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (1) ರ ದಿ:15.6.2004 ರ ಅಧಿಕೃತ ಜ್ಞಾಪನದ ಮೂಲಕ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಉತ್ತರ ಪಡೆದು ಅದನ್ನು ಪರಿಶೀಲಿಸಿದ ನಂತರ ಪ್ರಕರಣದ ಬಗ್ಗೆ ಪೂರ್ಣ ಪ್ರಮಾಣದ ವಿಚಾರಣೆ ನಡೆಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ, ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ.ರೇಗಿಸ್ ಫಿಲೋಮಿನಾರಾಜ್, ರೀಡರ್, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗರವರನ್ನು ಇಲಾಖಾ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದ್ದು ಎರಡು ತಿಂಗಳ ಒಳಗಾಗಿ ವರದಿ ನೀಡುವಂತೆ ಆದೇಶಿಸಿದ್ದರೂ ಸಹ ಇಲಾಖಾ ವಿಚಾರಣೆಯ ಬಗ್ಗೆ ಈವರೆಗೆ ಯಾವುದೇ ವರದಿ ಬಂದಿರುವುದಿಲ್ಲ. ಇತ್ತೀಚೆಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ನಡೆಸಿದ ರಿವ್ಯೂ ಸಭೆಯಲ್ಲಿ ಕಾರ್ಯದರ್ಶಿಗಳು, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನು ನೇಮಿಸುವಂತೆ ಆದೇಶಿಸಿರುವ ಹಿನ್ನೆಲೆಯಲ್ಲಿ ಪ್ರಸ್ತುತ ವಿಚಾರಣಾಧಿಕಾರಿಗಳನ್ನು ಬದಲಾಯಿಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 44 ಡಿಜಿಡಿ 2002(ಭಾಗ), ಬೆಂಗಳೂರು, ದಿನಾಂಕ 23ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನಲೆಯಲ್ಲಿ ವಿಚಾರಣಾಧಿಕಾರಿಯಾಗಿ ನೇಮಿಸಿದ್ದ ರೇಗಿಸ್ ಫಿಲೋಮಿನಾ ರಾಜ್, ರೀಡರ್, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ, ಇವರ ಬದಲಿಗೆ ಶ್ರೀ.ಆರ್.ಜಿ.ಸೇಜಾಖಾನ್ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು. ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿ ಆದೇಶ ಹೊರಡಿಸಿದೆ. ಶ್ರೀಮತಿ ನಿರ್ಮಲಾ ಬೆಳಕೇರ, ಉಪನ್ಯಾಸಕರು, ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯ, ಗುಲ್ಬರ್ಗಾ ರವರು ಮಂಡನಾಧಿಕಾರಿಯಾಗಿ ಮುಂದುವರೆಯುವರು.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಪ್ರತಿಯೊಂದು ಆರೋಪಗಳನ್ನು ವಿಚಾರಣೆಗೊಳಪಡಿಸಿ ಸಿಸಿಎ ನಿಯಮ 11 ರಲ್ಲಿ ತಿಳಿಸಿರುವ ಎಲ್ಲಾ ವಿಧಿ–ವಿಧಾನಗಳನ್ನು ಅನುಸರಿಸಿ, ಆರೋಪಗಳು ಸಾಬೀತಾಗಿದ್ದರೆ ಯಾವ ದಾಖಲೆಗಳ ಆಧಾರದ ಮೇಲೆ, ಸಾಬೀತಾಗದೆ ಇದ್ದರೆ ಯಾವ

ದಾಖಲೆಗಳ ಆಧಾರದ ಮೇಲೆ ಎಂಬುದನ್ನು ವಿಚಾರಣಾ ವರದಿಯಲ್ಲಿ ನಿರ್ಧಿಷ್ಟವಾಗಿ ದಾಖಲಿಸಿ, ಅನುಬಂಧ–3 ರಲ್ಲಿ ನಮೂದಿಸಲಾದ ಎಲ್ಲಾ ಮೂಲ ದಾಖಲೆಗಳೊಂದಿಗೆ ವಿಚಾರಣಾ ವರದಿಯನ್ನು ಈ ಆದೇಶ ತಲುಪಿದ ದಿನಾಂಕದಿಂದ 2 ತಿಂಗಳೊಳಗಾಗಿ ತಪ್ಪದೆ ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ವಿಚಾರಣಾಧಿಕಾರಿಗಳಿಗೆ ವಿಚಾರಣೆ ನಡೆಸಲು ಸೂಕ್ತ ಸ್ಥಳಾವಕಾಶ, ಒಬ್ಬ ಬೆರಳಚ್ಚುಗಾರರ ಅಥವಾ ಶೀಘ್ರ ಲಿಪಿಗಾರರ ಸೇವೆ ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಮತ್ತು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಅವರಿಗೆ ರೂ.5000/– ಸಂಭಾವನೆಯನ್ನು ಹಾಗೂ ರೂ.1000/–ಗಳ ಸಾರಿಗೆ ಭತ್ಯವನ್ನು ನೀಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 170

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇ–1,2)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಓ ಲಕ್ಷ್ಮಣ, ವ್ಯವಸ್ಥಾಪಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇವರು ಪ್ರವಾಸ ಭತ್ಯೆಯನ್ನು ನಗದೀಕರಿಸಿ ದುರುಪಯೋಗಪಡಿಸಿಕೊಂಡ ಹಿನ್ನೆಲೆಯಲ್ಲಿ ಇವರ ಅಮಾನತ್ತನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಹಾವೇರಿ ಇವರ ತನಿಖಾ ವರದಿ ದಿ.25-11-04.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಆದೇಶ ಸಂ. ಹಾಜಿಪಂ/ಸಿಬ್ಬಂದಿ (2)/ಇವಿ/ವಹಿ-9/04-05, ದಿ. 26-11-04.
3. ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ/ 229/ಜಿಪಅ/2004, ದಿ. 30-6-05.
4. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರ ಪತ್ರ ಸಂ. ಹಾಜಿಪಂ/ ಸಿಬ್ಬಂದಿ (2)/ಇವಿ/ವಹಿ-9/04-05, ದಿ.17-12-2005.

**ಪ್ರಸ್ತಾವನೆ**

ಮುಖ್ಯ ಲೆಕ್ಕಾಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರು ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿಯಲ್ಲಿಯ ಪ್ರವಾಸ ಭತ್ಯೆಯನ್ನು ನಗದೀಕರಿಸುವ ಕುರಿತಂತೆ ಲೆಕ್ಕ ತಪಾಸಣೆಯನ್ನು ಜರುಗಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅನುಸಾರ ವರದಿಯನ್ನು ನೀಡಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಲಾಗಿ ದಿ. 21-8-2004 ರಿಂದ 03-11-2004 ರ ಅವಧಿಯಲ್ಲಿ ಒಟ್ಟು ರೂ. 25,71,760-00 ಗಳ ಪ್ರವಾಸ ಭತ್ಯೆಯನ್ನು ಕಾರ್ಯಾಲಯದ ವ್ಯವಸ್ಥಾಪಕರು ತಾವೇ ತಯಾರಿಸಿ ಮೇಲಾಧಿಕಾರಿಗಳ ರುಜುಗಳನ್ನು ತಾವೇ ಮಾಡಿ ಖಜಾನೆಯಿಂದ ಚೆಕ್ಕುಗಳನ್ನು ಪಡೆದು ನಂತರ ಅವುಗಳನ್ನು ಬ್ಯಾಂಕಿನಲ್ಲಿ ನಗದೀಕರಿಸಿ ಸಂಬಂಧಿಸಿದ ಸಿಬ್ಬಂದಿಯವರಿಗೆ ಬಟವಾಡೆ ಮಾಡಿರುವ ಹಾಗೆ ದಾಖಲೆಗಳನ್ನು ಸೃಷ್ಟಿಸಿರುವುದು ತಿಳಿದು ಬರುತ್ತದೆ. ಅಲ್ಲದೇ ಈ ಹಣವನ್ನು ನಗದು ಪುಸ್ತಕದಲ್ಲಿ ಖರ್ಚು ಹಾಕಿರುವುದು ಸಹ ಕಂಡುಬಂದಿರುತ್ತದೆ. ಮುಂದುವರೆದು ತನಿಖಾ ವರದಿಯಲ್ಲಿ ತಿಳಿಸಿರುವಂತೆ ಕಚೇರಿಯ ವ್ಯವಸ್ಥಾಪಕರಾದ ಶ್ರೀ ಓ. ಲಕ್ಷ್ಮಣ ಇವರು ಮೇಲಿನ ಈ ಪ್ರವಾಸ ಭತ್ಯೆಯ ಬಿಲ್ಲುಗಳನ್ನು ತಾವೇ ಸೃಷ್ಟಿ ಮಾಡಿ ತಯಾರಿಸಿ ಖಜಾನೆಗೆ ಸಲ್ಲಿಸಿ ಚೆಕ್ ಪಡೆದು ನಂತರ ಹಣವನ್ನು ಯಾರಿಗೂ ಬಡವಾಡೆ ಮಾಡಿರುವುದಿಲ್ಲವೆಂದು ತಪ್ಪೊಪ್ಪಿಗೆ ನೀಡಿರುವುದು ತಿಳಿದುಬಂದಿರುತ್ತದೆ. ಈ ಹಣದ ಪೈಕಿ ದಿ. 25-11-2004 ರಂದು ರೂ. 17,50,000-00 ಗಳನ್ನು ಭರಣಾ ಮಾಡಿರುವುದಾಗಿ ವರದಿ ನೀಡಿರುತ್ತಾರೆ.

ಈ ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿಯಲ್ಲಿ ವ್ಯವಸ್ಥಾಪಕರಾಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಓ. ಲಕ್ಷ್ಮಣ ಇವರು ಕಚೇರಿಯ ಸಿಬ್ಬಂದಿಯವರ ಪ್ರವಾಸ ಭತ್ಯೆ ಬಿಲ್ಲುಗಳನ್ನು ನಿಯಮಗಳನ್ನು ಪಾಲಿಸದೇ ತಾವೇ ಖಜಾನೆಗೆ ಸಲ್ಲಿಸಿ, ಖಜಾನೆಯಿಂದ ಚೆಕ್ ಪಡೆದು ನಂತರ ನಗದೀಕರಿಸಿ ಸಂಬಂಧಿಸಿದ ಸಿಬ್ಬಂದಿಯವರಿಗೆ ಬಟವಾಡೆ ಮಾಡಿದ ಹಾಗೆ ದಾಖಲೆಗಳನ್ನು ಸೃಷ್ಟಿಸಿ ಇಷ್ಟು ಬೃಹತ್ ಮೊತ್ತದ ಪ್ರವಾಸ ಭತ್ಯೆಯನ್ನು ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಈ ಪ್ರಕರಣದಲ್ಲಿ ಹೆಚ್ಚಿನ ತನಿಖೆಯನ್ನು ಕೈಗೊಳ್ಳುವ ಸಲುವಾಗಿ ಹಾಗೂ ಇವರನ್ನು ಸೇವೆಯಲ್ಲಿ ಮುಂದುವರೆಸಿದ್ದಲ್ಲಿ ಇನ್ನಷ್ಟು ಹಣಕಾಸಿನ ದುರುಪಯೋಗವನ್ನು ಮಾಡಿಕೊಳ್ಳುವ ಸಾಧ್ಯತೆಯನ್ನು ಮನಗಂಡು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಶ್ರೀ ಓ ಲಕ್ಷ್ಮಣ, ವ್ಯವಸ್ಥಾಪಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇವರನ್ನು ಇಲಾಖಾ ವಿಚಾರಣೆ ಕಾಯ್ದಿರಿಸಿ, ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶ ಹೊರಡಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಸರ್ಕಾರಿ ಆದೇಶದಲ್ಲಿ ಇವರ ಅಮಾನತ್ತಿನ ಅವಧಿಯನ್ನು ದಿ. 26-05-05 ರಿಂದ 6 ತಿಂಗಳವರೆಗೆ ವಿಸ್ತರಿಸಲಾಗಿದೆ. ಪ್ರಸ್ತುತ ಈ ಪ್ರಕರಣದಲ್ಲಿ ಆಪಾದಿತ ಅಧಿಕಾರಿಗಳ ವಿರುದ್ಧ ದೋಷಾರೋಪಣೆಯನ್ನು ಜಾರಿ

ಮಾಡಲು ಕ್ರಮ ಕೈಗೊಳ್ಳುತ್ತಿರುವುದರಿಂದ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾವೇರಿ ಇವರು ಶ್ರೀ ಓ.ಲಕ್ಷ್ಮಣ ಇವರ ಅಮಾನತ್ತಿನ ಅವಧಿಯನ್ನು ದಿ. 26-11-2005 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ : ಗ್ರಾಅಪ 229 ಜಿಪಅ 04, ಬೆಂಗಳೂರು, ದಿನಾಂಕ: 27ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ಸರಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 10 (6) ರನ್ವಯ ಶ್ರೀ ಓ. ಲಕ್ಷ್ಮಣ, ವ್ಯವಸ್ಥಾಪಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇವರ ಅಮಾನತ್ತಿನ ಅವಧಿಯನ್ನು ದಿ. 26-11-2005 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಿ ಆದೇಶಿಸಿದೆ.

ವಿಸ್ತರಿಸಿದ ಅಮಾನತ್ತಿನ ಅವಧಿಯಲ್ಲಿ ಶ್ರೀ ಓ. ಲಕ್ಷ್ಮಣ, ಅಂದಿನ ವ್ಯವಸ್ಥಾಪಕರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಓ. ಲಕ್ಷ್ಮಣ, ಇವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 171

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಗುಲ್ಬರ್ಗಾ ಯಾಂತ್ರಿಕ ಉಪ ವಿಭಾಗದಲ್ಲಿ ನಡೆದಿರುವ ಇಲಾಖಾ ವಿಚಾರಣೆ ನಂತರ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1. ಮುಖ್ಯಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರ ಪತ್ರ ಸಂ:ಜಿಪಂಗು/ಆಡಳಿತ/ವಿಚಾರಣೆ/12/03-04, ದಿ.26-10-04.
2. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ. ಗ್ರಾಅಪ:40:ಇಎಸ್‌ಕ್ಯೂ:04, ದಿ.15-12-04
3. ಶ್ರೀ ಶರಣಯ್ಯ , ದ್ವಿ.ದ.ಸ. ಇವರ ಲಿಖಿತ ಉತ್ತರ ದಿ. 12-2-2005.
4. ಶ್ರೀ ಎಂ. ಕೃಷ್ಣಪ್ಪ, ಸಕಾಇಂ ಇವರ ಲಿಖಿತ ಹೇಳಿಕೆ ದಿ. 8-2-05
5. ಶ್ರೀ ಪಿ.ಆರ್.ಗುಂಡಾ, ಸಕಾಇಂ ಇವರ ಲಿಖಿತ ಹೇಳಿಕೆ ದಿ. 2-2-05
6. ಶ್ರೀ ಎಂ. ಸುಭಾಷ್ ಮರಕುಂದಿ, ಸಕಾಇಂ ಇವರ ಲಿಖಿತ ಹೇಳಿಕೆ ದಿ.9-2-05.
7. ಶ್ರೀ ಎಸ್.ಎಸ್.ಕುಕ್ಕುಂದಾ, ಸಕಾಇಂ ಇವರ ಲಿಖಿತ ಹೇಳಿಕೆ ದಿ.21-2-05.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಮೇಲೆ ಓದಲಾದ ಸಂಖ್ಯೆ. (1) ರ ದಿ. 26.10.2004 ಪತ್ರದಲ್ಲಿ ಗುಲ್ಬರ್ಗಾ ಯಾಂತ್ರಿಕ ಉಪ ವಿಭಾಗದಲ್ಲಿ ಖಾಯಂ ಸಿಬ್ಬಂದಿಗಳ ವೇತನದಲ್ಲಿ ಸಾಮಾನ್ಯ ಭವಿಷ್ಯ ನಿಧಿ ಮತ್ತು ಹಬ್ಬದ ಮುಂಗಡಗಳಲ್ಲಿ ಹೆಚ್ಚುವರಿ ಹಣ ಡ್ರಾ ಮಾಡಿ ದುರುಪಯೋಗಪಡಿಸಿಕೊಂಡ ಅವ್ಯವಹಾರಕ್ಕೆ ಕಾರಣರೆಂಬ 1) ಶ್ರೀ ಎಸ್.ಎಸ್.ಕುಕ್ಕುಂದ, 2) ಪಿ.ಆರ್.ಗುಂಡಾ, 3) ಸುಭಾಷ್ ಮರಕುಂದಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು, 4) ಶ್ರೀ ಶರಣಯ್ಯ, ದ್ವಿ.ದ.ಸ. ಇವರುಗಳಿಗೆ ಕೆ.ಸಿ.ಎಸ್. (ಸಿಸಿಎ) ನಿಯಮ 11 ರ ರೀತ್ಯ ದಿ. 5-1-04 ರಂದು ಕಾರಣ ಕೇಳುವ ನೋಟೀಸನ್ನು ಅನುಬಂಧ- 1 ರಿಂದ 4 ರೊಂದಿಗೆ ಆರೋಪ ಪಟ್ಟಿ ಜಾರಿಗೊಳಿಸಿ ಇಲಾಖಾ ವಿಚಾರಣೆ ಹೂಡಿದ್ದಾಗಿಯೂ, ಆಪಾದಿತರ ಲಿಖಿತ ಹೇಳಿಕೆ ಪರಿಶೀಲಿಸಿ, ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಗುಲ್ಬರ್ಗಾ ಇವರು ಉಪ ಯೋಜನಾ ವ್ಯವಸ್ಥಾಪಕರು, ಜಿಲ್ಲಾ ನೆರವು ಘಟಕ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರನ್ನು ಈ ಪ್ರಕರಣದಲ್ಲಿ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದ್ದಾಗಿಯೂ, ಅದರಂತೆ ವಿಚಾರಣಾಧಿಕಾರಿಯವರು ವಿವರವಾದ ವಿಚಾರಣೆ ನಡೆಸಿ ವಿಚಾರಣಾ ವರದಿ ಸಲ್ಲಿಸಿದ್ದರೆಂದೂ, ವಿಚಾರಣಾ ವರದಿಯಂತೆ ಈ ಕೆಳಕಂಡ ಸಹಾಯಕ ಕಾರ್ಯಪಾಲಕ ಅಭಿಯಂತರರು/ ಸಿಬ್ಬಂದಿಯ ಮೇಲಿನ ಹಣ ದುರುಪಯೋಗದ ಆರೋಪ ಸಾಬೀತಾಗಿರುವುದಾಗಿ ವರದಿ ಮಾಡಿದ್ದರು.

| ಕ್ರ ಸಂ | ಅಧಿಕಾರಿ:ನೌಕರನ ಹೆಸರು | ಅವಧಿ | ದುರುಪಯೋಗದ ಮೊತ್ತ |
|---|---|---|---|
| 1 | ಎಸ್.ಎಸ್.ಕುಕ್ಕುಂದಾ,ಸಕಾಇಂ | 1-8-2000 ರಿಂದ 31-5-2001 | 1,31,485-00 |
| 2 | ಸಿ.ಆರ್.ಗುಂಡಾ,ಸಕಾಇಂ | 12-6-01 ರಿಂದ 18-8-01 | 40,422-00 |
| 3 | ಸುಭಾಶ್‌ಮರಕುಂದಿ, ಸಕಾಇಂ | 18-8-01ರಿಂದ31-1-2002 | 2,45,360-00 |

| ಕ್ರ ಸಂ | ಅಧಿಕಾರಿ:ನೌಕರನ ಹೆಸರು | ಅವಧಿ | ದುರುಪಯೋಗದ ಮೊತ್ತ |
|---|---|---|---|
| 4 | ಎಂ.ಕೃಷ್ಣಪ್ಪ,ಸಕಾಇಂ | ಜುಲೈ 2002ರಿಂದ ಡಿಸೆಂಬರ್ 2002 | 1,45,016-00 |
| 5 | ಶರಣಯ್ಯ,ದ್ವಿದಸ | ಮೇಲಿನ ಪೂರ್ಣ ಅವಧಿಯಲ್ಲಿ ಇದ್ದವರು. | ಮೇಲಿನ ನಾಲ್ಕು ಜನ ಅಧಿಕಾರಿಗಳ ಅವಧಿಯಲ್ಲಿ ಡ್ರಾ ಮಾಡಲಾದ ಪೂರ್ಣ ಮೊತ್ತ600643-00 ರೂ.ಗಳಿಗೆ ಜಂಟಿ ಜವಾಬ್ದಾರಿ. |

ವಿಚಾರಣಾ ಅಧಿಕಾರಿಯವರು ತಮ್ಮ ವರದಿಯಲ್ಲಿ ಶ್ರೀ ಶರಣಯ್ಯ, ದ್ವಿ.ದ.ಸ. ಇವರು ದುರುದ್ದೇಶದಿಂದ ಈ ಕೃತ್ಯವೆಸಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ ಎಂದು ತಿಳಿಸಿ, ಮುಂದುವರೆದು ಶ್ರೀ ಶರಣಯ್ಯ, ಇವರು ತಮ್ಮ ಹೇಳಿಕೆಯಲ್ಲಿ ತಿಳಿಸಿದಂತೆ ಹೆಚ್ಚುವರಿಯಾಗಿ ಹಣ ಸೆಳೆದಿದ್ದು ನಿಜವಿರುತ್ತದೆ. ಅದರಲ್ಲಿ ರೂ. 3,000/- ತಮಗೆ ನೀಡುತ್ತಿದ್ದರು, ಉಳಿದ ಹಣವನ್ನು ಮೇಲಾಧಿಕಾರಿಗಳಿಗೆ ನೀಡುತ್ತಿದ್ದೆ ಎಂದು ಹೇಳಿಕೆ ನೀಡಿರುತ್ತಾರೆ, ಇದರ ಪ್ರಕಾರ ಹೆಚ್ಚುವರಿಯಾಗಿ ಹಣ ಸೆಳೆಯುವಲ್ಲಿ ಮಾಡಬೇಕಾದ ಎಲ್ಲಾ ಕೃತ್ಯಗಳನ್ನು ತಾವು ಜರುಗಿಸಿದ್ದಕ್ಕೆ ಒಪ್ಪಿಕೊಂಡಂತಾಗಿದೆ, ಆ ಹಣವನ್ನು ಹಂಚಿಕೊಂಡಿದ್ದಕ್ಕೆ ಯಾವ ಸಾಕ್ಷಿಯೂ ಇರುವುದಿಲ್ಲ, ಆದ್ದರಿಂದ, ಹಣ ಸೆಳೆದಿದ್ದು ಖಚಿತವಾದಂತೆ ಸಂಪೂರ್ಣ ಹಣ ಅವರೇ ತೆಗೆದುಕೊಂಡಿದ್ದಾರೆ ಎಂದು ಸ್ಪಷ್ಟವಾಗುತ್ತದೆ ಎಂದು ತಿಳಿಸಿರುತ್ತಾರೆ.

ಅಲ್ಲದೆ, ವಿಚಾರಣಾಧಿಕಾರಿಯವರು ತಮ್ಮ ವರದಿಯಲ್ಲಿ ಈ ಪ್ರಕರಣದಲ್ಲಿ ಹಣ ಸೆಳೆಯುವ ಅಧಿಕಾರಿಗಳು ಬಿಲ್ಲಿಗೆ ಮೇಲು ಸಹಿ ಮಾಡುವುದರ ಮೂಲಕ ಜವಾಬ್ದಾರಿಯನ್ನು ಹೊಂದಿದ್ದಾರೆ ಎನ್ನುವ ಅಂಶವನ್ನು ತಿಳಿಸಿರುತ್ತಾರೆ. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ತಮ್ಮ ಪತ್ರ ದಿ. 26-10-2004 ರಲ್ಲಿ ಸದರಿ ಆರೋಪಿತರಿಗೆ ವಿಚಾರಣಾ ವರದಿಯೊಂದಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ಸಹ ನೀಡಿದ್ದು , ಅವರಿಂದ ಲಿಖಿತ ಉತ್ತರಗಳನ್ನು ಪಡೆದು ಆಪಾದಿತ ಸಹಾಯಕ ಕಾರ್ಯಪಾಲಕ ಅಭಿಯಂತರರು ಗುಲ್ಬರ್ಗಾ ಜಿಲ್ಲಾ ಪಂಚಾಯತ್ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿಲ್ಲವಾದ್ದರಿಂದ, ವಿಚಾರಣಾ ವರದಿಯಂತೆ ಮುಂದಿನ ಕ್ರಮಕ್ಕಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿ ಕೊಟ್ಟಿರುತ್ತಾರೆ

ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ, ಅದರಂತೆ ಆಪಾದಿತ ಅಧಿಕಾರಿಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿ. 15-12-2004 ರ 2ನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿತ್ತು. ಆಪಾದಿತ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳಾದ 1) ಶ್ರೀ ಎಸ್.ಎಸ್. ಕುಕ್ಕುಂದ, 2) ಶ್ರೀ ಪಿ.ಆರ್.ಗುಂಡ, 3) ಶ್ರೀ ಸುಭಾಷ್ ಮರಕುಂದಿ ಇವರುಗಳು 2ನೇ ಕಾರಣ ಕೇಳುವ ನೋಟೀಸಿಗೆ ಲಿಖಿತ ಹೇಳಿಕೆ ಸಲ್ಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಿಂದ (6) ರವರೆಗಿನ ಲಿಖಿತ ಹೇಳಿಕೆಗಳಲ್ಲಿ ಉಳಿದ ಆಪಾದಿತರೆಲ್ಲರೂ ಈ ದುರುಪಯೋಗ ಮಾಡಿದ ಹಣಕ್ಕೆ ಶ್ರೀ ಶರಣಯ್ಯ, ದ್ವಿ.ದ.ಸ. ಇವರೇ ಪೂರ್ಣ ಜವಾಬ್ದಾರರಾಗಿದ್ದು , ದಾಖಲೆಗಳಲ್ಲಿ ಎಲ್ಲಾ ಅವರದೇ ಕೈ ಬರಹದಿಂದ ತಿದ್ದಿರುವುದು, ಹೆಚ್ಚುವರಿ ಡ್ರಾ ಮಾಡಲಾದ ಹಣವನ್ನು ಸ್ವಂತಕ್ಕೆ ಬಳಸಿಕೊಂಡಿರುವುದು ಇತ್ಯಾದಿ ದುಷ್ಕೃತ್ಯ ಎಸಗಿದ್ದು ಇದಕ್ಕೆ ಇವರೇ ಸಂಪೂರ್ಣ ಹೊಣೆಗಾರರೆಂದು ತಿಳಿಸಿ, ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿರುತ್ತಾರೆ. ಮತ್ತೊಬ್ಬ ಆಪಾದಿತ ನೌಕರರಾದ ಶ್ರೀ ಶರಣಯ್ಯ, ದ್ವಿ.ದ.ಸ. ಇವರು ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲ. ಆದರೆ, ದಿ. 12-2-2005 ರಂದು ಸಲ್ಲಿಸಿದ್ದ ಹೇಳಿಕೆಯಲ್ಲಿ ಈ ಎಲ್ಲಾ ಹಣ ದುರುಪಯೋಗಕ್ಕೆ ಮೇಲಿನ ಅಧಿಕಾರಿಗಳೇ ಕಾರಣರೆಂದು, ತಾವು ನಿರ್ದೋಷಿ ಎಂದು ತಿಳಿಸಿರುತ್ತಾರೆ.

ಆಪಾದಿತರ ಮೇಲಿನ ಆರೋಪ, ಆ ಬಗ್ಗೆ ವಿಚಾರಣಾ ವರದಿ ಹಾಗೂ ಶಿಸ್ತು ಪ್ರಾಧಿಕಾರದ ನಿರ್ಣಯಗಳು ಈ ಕೆಳಕಂಡಂತಿವೆ.

**ಆಪಾದನೆ**:-

ಶ್ರೀ ಎಸ್.ಎಸ್.ಕುಕ್ಕುಂದಾ, ಸಕಾಇಂ ಇವರು 1,31,485-00 ರೂ.ಗಳನ್ನು, ಶ್ರೀ ಪಿ.ಆರ್.ಗುಂಡಾ, ಸಕಾಇಂ, ಇವರು 49,472-00 ರೂ.ಗಳನ್ನು, ಶ್ರೀ.ಸುಭಾಶ್ ಮರಕುಂದಿ, ಇವರು 2,72,360-00 ರೂ.ಗಳನ್ನು ಮತ್ತು ಶ್ರೀ.ಕೃಷ್ಣಪ್ಪ ಇವರು 1,45,016-00 ರೂ.ಗಳನ್ನು ಸದರಿ ಉಪ ವಿಭಾಗದ ಸ.ಕಾ.ಇಂ.ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಖಜಾನೆಯಿಂದ ಸಿಬ್ಬಂದಿ ವೇತನದ ಬಾಬ್ತು ಹೆಚ್ಚುವರಿಯಾಗಿ ಡ್ರಾ ಮಾಡಲು ಶ್ರೀ.ಶರಣಯ್ಯ, ಇವರಿಗೆ ಸಹಕಾರ ನೀಡಿ, ಒಟ್ಟು 6,00,643-00 ಗಳ ಹಣ ದುರುಪಯೋಗ ಮತ್ತು ಕರ್ತವ್ಯ ಲೋಪ ಎಸಗಿರುತ್ತಾರೆ ಎಂಬ ಆರೋಪ.

**ವಿಚಾರಣಾ ವರದಿ**: ಹಣ ಸೆಳೆಯುವ ಅಧಿಕಾರಿ, ಬಿಲ್ಲಿಗೆ ಸಹಿ ಮಾಡುವುದರ ಮೂಲಕ ಜವಾಬ್ದಾರಿ ಹೊಂದಿದ್ದಾರೆ ಎನ್ನುವುದು ಅವರ ಕರ್ತವ್ಯದಲ್ಲಿ ಬರುವ ಅನಿವಾರ್ಯ ಅಂಶ ಅದನ್ನು ಅವರು ಒಪ್ಪಿಕೊಂಡಿದ್ದಾರೆ. ಎಲ್ಲಾ ಹಣ ಸೆಳೆಯುವ ಅಧಿಕಾರಿಗಳು ನಿಯಮಾನುರೀತ್ಯಾ ಮಾಡಬೇಕಾದ ಸಹಿಗಳನ್ನು ತಾವು ಮಾಡಿ ಕರ್ತವ್ಯ ನಿರ್ವಹಿಸಿರುವುದಾಗಿ ತಿಳಿಸಿದ್ದಾರೆ. ಶ್ರೀ.ಶರಣಯ್ಯ ಇವರು ಸದರಿ ಕಾರ್ಯಾಲಯಕ್ಕೆ ಕರ್ತವ್ಯಕ್ಕೆ ಹಾಜರಾದ ಮೇಲೆ ಖಾಯಂ ಸಿಬ್ಬಂದಿಗಳ ಸಂಕಲನ ಶಾಖೆಯ ಕೆಲಸವನ್ನು ವಹಿಸಿಕೊಂಡು ಮೊದಲನೇ ತಿಂಗಳಲ್ಲೇ

ಹೆಚ್ಚುವರಿಯಾಗಿ 12,159-00ಗಳನ್ನು ಡ್ರಾ ಮಾಡಿದ್ದಾರೆ. ಇವರು ಅಲ್ಲಿಗೆ ಬಂದಮೇಲೆ ಇಂತಹ ಪ್ರಕರಣಗಳು ಪ್ರಾರಂಭವಾಗಿವೆ ಎನ್ನುವುದು ಗಮನಾರ್ಹ ಅಂಶ. ಇವರೇ ಇಂತಹ ಕಾರ್ಯವನ್ನು ಮಾಡಿ ಅಧಿಕಾರಿಗಳಿಗೆ ಮತ್ತು ಸರ್ಕಾರಕ್ಕೆ ಮೋಸ ಮಾಡಿದ್ದಾರೆ. 28 ತಿಂಗಳ ಅವಧಿಗೆ ನಿರಂತರವಾಗಿ ಹೆಚ್ಚುವರಿ ಹಣ ಡ್ರಾ ಮಾಡಿದ್ದು ಒಂದು ಭಾರಿಯೂ ಖಜಾನೆಯಿಂದ ಬಿಲ್ಲು ಹಿಂದಕ್ಕೆ ಬಂದಿಲ್ಲ, ಆಕ್ಷೇಪವಾಗಿರುವುದಿಲ್ಲ ತಿದ್ದುಪಡಿ ಮಾಡಿ ಹಣ ಕಡಿತಗೊಳಿಸಿಲ್ಲ. ಖಜಾನೆ ಅಧಿಕಾರಿಗಳು ಸಹ ಈ ವಿಷಯದಲ್ಲಿ ಜವಾಬ್ದಾರಿಯಿಂದ ಕೆಲಸ ನಿರ್ವಹಿಸಿಲ್ಲ. ಕೆಲವೊಂದು ದಾಖಲೆಗಳಲ್ಲಿ ಖಜಾನೆಗೆ ಸಲ್ಲಿಸಿದ್ದ ಬಿಲ್ಲು, ಬಿಲ್ಲಿನಲ್ಲಿರುವ ಹಣ, ಖಜಾನೆಯಿಂದ ನೀಡಲಾದ ಚೆಕ್ ಮತ್ತು ಚೆಕ್‌ನ ಪ್ರಕಾರ ಎಲ್ಲಾವೂ ಸರಿಯಿದ್ದು, ವೇತನ ಬಿಲ್ಲುಗಳು ಮಾತ್ರ ಮೊದಲು ಇರುವ ದಾಖಲೆಯ ನಮೂದನೆ ಮೇಲೆ ಬಿಳಿ ಬಣ್ಣ ಬಳಿದು ಸದರಿ ಹಣವನ್ನು ಕಡಿಮೆ ನಮೂದಿಸಿದ್ದಾರೆ. ಮೊದಲು ಇರುವ ಅಂಕಿಅಂಶಗಳು ಪುಟದ ಹಿಂಭಾಗದಲ್ಲಿ ನೋಡಿದರೆ ಸ್ಪಷ್ಟವಾಗಿ ಗೊತ್ತಾಗುತ್ತದೆ. ಇದು ಶ್ರೀ.ಶರಣಯ್ಯ ಇವರ ದುರುದ್ದೇಶವನ್ನು ಖಚಿತಪಡಿಸುತ್ತದೆ. ಉದಾಹರಣೆಗೆ 40,788-00 ರೂ. ಗಳ ಚೆಕ್ ಪಡೆದು ಗಳಿಕೆ ರಜೆ ನಗದೀಕರಣ ಬಿಲ್ಲಿನಲ್ಲಿ ನಂತರ ಬಣ್ಣ ಹಚ್ಚಿ 33,526-00 ಎಂದು ನಮೂದಿಸಲಾಗಿದೆ. ಮೇಲಾಧಿಕಾರಿಗಳ ಸಹಿ ಆದ ಮೇಲೆ ಅಂಕಿಅಂಶಗಳನ್ನು ತಿದ್ದಿದ್ದಾರೆ. ಅಕ್ಷರಗಳು ಶ್ರೀ.ಶರಣಯ್ಯ, ಇವರ ಅಕ್ಷರಗಳಾಗಿರುತ್ತವೆ. ಇವು ನಿಜವಾದ ತಪ್ಪುಗಳಾದಲ್ಲಿ ತಿದ್ದುಪಡಿಗೆ ಮೇಲಾಧಿಕಾರಿಗಳ ದೃಡೀಕರಣ ಪಡೆಯಬೇಕಾಗಿತ್ತು. ಈ ರೀತಿ ಅಕ್ರಮಗಳು ನಡೆಯುತ್ತಿದ್ದಾಗ ನೌಕರನೊಬ್ಬನ ಹಬ್ಬದ ಮುಂಗಡ 2000-00 ರೂ.ಗಳು ಪಾವತಿ ಆಗದ್ದರಿಂದ ಅವನು ಈ ಕುರಿತು ಮೇಲಾಧಿಕಾರಿಗಳಿಗೆ ವಿನಂತಿಸಿದಾಗ ಈ ಹಗರಣ ಬೆಳಕಿಗೆ ಬಂದಿದೆ. ವಿಚಾರಣೆಯ ಸಮಯದಲ್ಲಿ ಶ್ರೀ.ಶರಣಯ್ಯ ಇವರೇ Acquitance Rollನ ಕೆಳಭಾಗದ ಒಟ್ಟು ಮೊತ್ತವನ್ನು ನಮೂದಿಸುವಾಗ ಹೆಚ್ಚುವರಿ ಅಂಕಿಅಂಶಗಳನ್ನು ನಮೂದಿಸಿ ಹೆಚ್ಚುವರಿ ಹಣ ಪಡೆದು ಸಿಬ್ಬಂದಿಗೆ ಸಲ್ಲಬೇಕಾದ ವೇತನ ನೀಡಿದ ನಂತರ ಉಳಿದ ಹೆಚ್ಚುವರಿ ಮೊತ್ತವನ್ನು ಸ್ವಂತಕ್ಕೆ ಪಡೆದು ಕೊಂಡಿದ್ದಾರೆ. ಇದು ನಿಜ ಎಂದು ವಿಚಾರಣೆಯಲ್ಲಿ ಒಪ್ಪಿಕೊಂಡಿದ್ದಾರೆ. ಮೇಲಾಧಿಕಾರಿಗಳು ಅದರಲ್ಲಿ ತಮಗೆ 3000-00 ರೂ.ಗಳನ್ನು ನೀಡುತ್ತಿದ್ದರು ಎಂದು ತಿಳಿಸಿದ್ದಾರೆ, ಹೆಚ್ಚುವರಿ ಹಣ ಡ್ರಾ ಮಾಡುವಲ್ಲಿನ ಎಲ್ಲಾ ಕೃತ್ಯಗಳನ್ನು ತಾವೇ ಜರುಗಿಸಿದ್ದಾಗಿ ಒಪ್ಪಿಕೊಂಡಿದ್ದಾರೆ. ಹಣ ಹಂಚಿಕೊಂಡಿದ್ದಕ್ಕೆ ಯಾವ ಸಾಕ್ಷಿಯೂ ಇಲ್ಲ. ಹಾಗಾಗಿ ಸಂಪೂರ್ಣ ಹಣವನ್ನು ಅವರೇ ತೆಗೆದುಕೊಂಡಿದ್ದಾರೆಂದು ಸ್ಪಷ್ಟವಾಗುತ್ತದೆ. ಅಧಿಕಾರಿಗಳು ಸಹಿ ಮಾಡಿದ ಮೇಲೆ ಬಿಳಿ ಬಣ್ಣ ಹಚ್ಚಿ ದಾಖಲೆಗಳನ್ನು ಇವರು ತಮ್ಮ ಕೈಬರಹದಲ್ಲಿ ತಿದ್ದಿದ್ದಾರೆ. ಈ ಎಲ್ಲಾ ಕೆಲಸಗಳನ್ನು ಇವರೇ ಖುದ್ದಾಗಿ ಮಾಡಿದ್ದಾರೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ.

**ಆಪಾದಿತ ಅಧಿಕಾರಿಗಳು ಎರಡನೇ ಕಾ.ಕೇ.ನೋ.ಗೆ ನೀಡಿದ ಲಿಖಿತ ಹೇಳಿಕೆ:**

**1.ಶ್ರೀ.ಎಸ್.ಎಸ್.ಕುಕ್ಕುಂದಾ, ಸಕಾಇಂ,:-** ಸಂಬಂಧಪಟ್ಟ ಅವಧಿಯಲ್ಲಿ ತಾವು ಗುಣ ನಿಯಂತ್ರಣ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರ ಮೇಲುಸ್ತುವಾರಿಯನ್ನು ಹೊಂದಿದ್ದು, ಶ್ರೀ.ಶರಣಯ್ಯ, ದ್ವಿ.ದ.ಸ., ಈ ರೀತಿ ಅಧಿಕಾರಿಗಳನ್ನು ಮೋಸಗೊಳಿಸಿ, ಪ್ರಕರಣದಲ್ಲಿ ತಮ್ಮನ್ನು ಭಾಗಿದಾರರನ್ನಾಗಿ ಮಾಡಿದ್ದಾರೆ. ಕಾರ್ಯಾಲಯದ ಎಲ್ಲಾ ಸಿಬ್ಬಂದಿಗಳ ವೇತನ ಡ್ರಾ ಮಾಡುವಲ್ಲಿ ಅಂದರೆ, ಆಯಾ ಸಿಬ್ಬಂದಿಗೆ ಎಷ್ಟು ವೇತನ ಕೊಡಬೇಕಾಗಿತ್ತು, ಅಷ್ಟು ವೇತನವನ್ನು ಪಾವತಿ ಮಾಡಿರುತ್ತಾನೆ. ಆದರೆ ಎಲ್ಲಾ ಸಿಬ್ಬಂದಿಗಳ ನಿಗದಿತ ವೇತನಕ್ಕಿಂತ ಹೆಚ್ಚಿಗೆ ಕೊನೆಗೆ ತಮಗೆ ಗೊತ್ತಾಗದ ಹಾಗೆ ಒಟ್ಟು ಮೊತ್ತದಲ್ಲಿ ಹೆಚ್ಚುವರಿ ಹಣ ಸೇರಿಸಿ, ಖಜಾನೆ ಅಧಿಕಾರಿಗಳೊಡನೆ ಶಾಮಿಲಾಗಿ ಹೆಚ್ಚುವರಿ ಹಣವನ್ನು ಡ್ರಾ ಮಾಡಿ ಸದರಿ ಸಿಬ್ಬಂದಿ ಶ್ರೀ.ಶರಣಯ್ಯ, ದ್ವಿ.ದ.ಸಹಾಯಕ ಇವರು ಹಣ ಪಡೆದು ದುರುಪಯೋಗ ಮಾಡಿರುತ್ತಾನೆ. ಈ ದುರುಪಯೋಗ ಮಾಡಿದ ಹಣಕ್ಕೆ ರೂ.1,31,485-00ಯನ್ನು ಸದರಿ ಸಿಬ್ಬಂದಿಯೇ ಸಂಪೂರ್ಣ ಹೊಣೆಗಾರನಾಗಿರುತ್ತಾನೆ ಎಂದು ತಿಳಿಸುತ್ತಾ, ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

**2. ಶ್ರೀ.ಪಿ.ಆರ್.ಗುಂಡಾ, ಸುಭಾಶ್ ಮರಕುಂದಿ, ಸಕಾಇಂ:**ಇವರ ಲಿಖಿತ ಹೇಳಿಕೆ ಒಂದೇ ರೀತಿ ಇದ್ದು ಅದು ಈ ಕೆಳಕಂಡಂತಿದೆ: ವಿಚಾರಣಾಧಿಕಾರಿಗಳ ವರದಿಯಂತೆ ಶ್ರೀ.ಶರಣಯ್ಯ, ಇವರು ಅಧಿಕಾರಿಗಳ ಸಹಿ ಪಡೆದ ನಂತರ ಮೂಲ ಬಿಲ್ಲುಗಳನ್ನು ತಿದ್ದಿ ಹೆಚ್ಚುವರಿ ಹಣ ಡ್ರಾ ಮಾಡಿರುವುದು, ದುರುಪಯೋಗ ಪಡಿಸಿಕೊಂಡಿರುವುದು, ಟೋಕನ್ ರದ್ದಾದ ನಂತರವೂ ಸಹ ಹೇಗೆ ಬಿಲ್ಲುಗಳನ್ನು ಪಾಸ್ ಮಾಡಿಸಿಕೊಂಡರೆಂಬುದು, ಹೆಚ್ಚುವರಿ ಮಾಡಲಾದ ಹಣವನ್ನು ತಮ್ಮ ಸ್ವಂತಕ್ಕೆ ಪಡೆದುಕೊಂಡಿರುವುದು ಹಣ ಅವರೇ ತೆಗೆದುಕೊಂಡಿದ್ದಾರೆಂಬುದು, ದಾಖಲೆಗಳಲ್ಲಿ ಎಲ್ಲಾ ಅವರದೇ ಕೈ ಬರಹ ಇರುವುದು, ಇತ್ಯಾದಿ ವಿಷಯಗಳು ವಿಚಾರಣೆಯಲ್ಲಿ ಶ್ರೀ.ಶರಣಯ್ಯ, ಇವರೇ ಈ ದುಷ್ಕೃತ್ಯ ಎಸಗಿದ್ದಾರೆ ಎಂಬುದು ಸಾಬೀತಾಗಿದ್ದು ಪ್ರಕರಣದಲ್ಲಿ ಒಳಗೊಂಡ ಪೂರ್ಣ ಹಣವನ್ನು ಶ್ರೀ.ಶರಣಯ್ಯ ಇವರಿಂದ ವಸೂಲಿ ಮಾಡಿ ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

**3. ಶ್ರೀ.ಕೃಷ್ಣಪ್ಪ, ಸಕಾಇಂ ಇವರ ಲಿಖಿತ ಹೇಳಿಕೆ:** ವಿಚಾರಣಾಧಿಕಾರಿಗಳ ವರದಿಯಂತೆ ಶ್ರೀ.ಶರಣಯ್ಯ, ಇವರು ಅಧಿಕಾರಿಗಳ ಸಹಿ ಪಡೆದ ನಂತರ ಮೂಲಬಿಲ್ಲುಗಳನ್ನು ತಿದ್ದಿ ಹೆಚ್ಚುವರಿ ಹಣ ಡ್ರಾ ಮಾಡಿರುವುದು, ದುರುಪಯೋಗಪಡಿಸಿಕೊಂಡಿರುವುದು, ಟೋಕನ್ ರದ್ದಾದ ನಂತರವೂ ಸಹ ಹೇಗೆ ಬಿಲ್ಲುಗಳನ್ನು ಪಾಸ್ ಮಾಡಿಸಿಕೊಂಡರೆಂಬುದು, ಹೆಚ್ಚುವರಿ ಮಾಡಲಾದ ಹಣವನ್ನು ತಮ್ಮ ಸ್ವಂತಕ್ಕೆ ಪಡೆದುಕೊಂಡಿರುವುದು ಹಣ ಅವರೇ ತೆಗೆದುಕೊಂಡಿದ್ದಾರೆಂಬುದು, ದಾಖಲೆಗಳಲ್ಲಿ ಎಲ್ಲಾ ಅವರದೇ ಕೈ ಬರಹ ಇರುವುದು, ಇತ್ಯಾದಿ ವಿಷಯಗಳು ವಿಚಾರಣೆಯಲ್ಲಿ ಶ್ರೀ.ಶರಣಯ್ಯ, ಇವರೇ ಈ ದುಷ್ಕೃತ್ಯ ಎಸಗಿದ್ದಾರೆ ಎಂಬುದು ಸಾಬೀತಾಗಿದ್ದು ಮತ್ತು ಶ್ರೀ.ಶರಣಯ್ಯ

ಇವರು ಜಿಪಂಇಂಉವಿ, ಚಿತ್ತಾಪುರ ಇಲ್ಲಿಯೂ ಸಹ ಇದೇ ರೀತಿ ದುಷ್ಕೃತ್ಯ ಎಸಗಿದ್ದಾರೆಂದು ತಿಳಿಸುತ್ತಾ, ಪ್ರಕರಣ ಒಳಗೊಂಡ ಪೂರ್ಣ ಹಣವನ್ನು ಶ್ರೀ.ಶರಣಯ್ಯ ಇವರಿಂದ ವಸೂಲಿ ಮಾಡಿ ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

4. **ಶ್ರೀ. ಸುಭಾಷ್ ಮರಕುಂದಿ, ಸಕಾಇಂ ಇವರ ಲಿಖಿತ ಹೇಳಿಕೆ:** ವಿಚಾರಣಾಧಿಕಾರಿಗಳ ವರದಿಯಂತೆ ಶ್ರೀ.ಶರಣಯ್ಯ, ಇವರು ಅಧಿಕಾರಿಗಳ ಸಹಿ ಪಡೆದ ನಂತರ ಮೂಲ ಬಿಲ್ಲುಗಳನ್ನು ತಿದ್ದಿ ಹೆಚ್ಚುವರಿ ಹಣ ಡ್ರಾ ಮಾಡಿರುವುದು, ದುರುಪಯೋಗ ಪಡಿಸಿಕೊಂಡಿರುವುದು, ಟೋಕನ್ ರದ್ದಾದ ನಂತರವೂ ಸಹ ಹೇಗೆ ಬಿಲ್ಲುಗಳನ್ನು ಪಾಸ್ ಮಾಡಿಸಿಕೊಂಡರೆಂಬುದು, ಹೆಚ್ಚುವರಿ ಮಾಡಲಾದ ಹಣವನ್ನು ತಮ್ಮ ಸ್ವಂತಕ್ಕೆ ಪಡೆದುಕೊಂಡಿರುವುದು ಹಣ ಅವರೇ ತೆಗೆದುಕೊಂಡಿದ್ದಾರೆಂಬುದು, ದಾಖಲೆಗಳಲ್ಲಿ ಎಲ್ಲಾ ಅವರದೇ ಕೈ ಬರಹ ಇರುವುದು, ಇತ್ಯಾದಿ ವಿಷಯಗಳು ವಿಚಾರಣೆಯಲ್ಲಿ ಶ್ರೀ.ಶರಣಯ್ಯ, ಇವರೇ ಈ ದುಷ್ಕೃತ್ಯ ಎಸಗಿದ್ದಾರೆ ಎಂಬುದು ಸಾಬೀತಾಗಿದ್ದು ಮತ್ತು ಶ್ರೀ.ಶರಣಯ್ಯ ಇವರು ಜಿಪಂಇಂಉವಿ, ಚಿತ್ತಾಪುರ ಇಲ್ಲಿಯೂ ಸಹ ಇದೇ ರೀತಿ ದುಷ್ಕೃತ್ಯ ಎಸಗಿದ್ದಾರೆಂದು ತಿಳಿಸುತ್ತಾ, ಪ್ರಕರಣ ಒಳಗೊಂಡ ಪೂರ್ಣ ಹಣವನ್ನು ಶ್ರೀ.ಶರಣಯ್ಯ ಇವರಿಂದ ವಸೂಲಿ ಮಾಡಿ ತಮ್ಮನ್ನು ದೋಷಮುಕ್ತರನ್ನಾಗಿ ಸುವಂತೆ ಕೋರಿದ್ದಾರೆ.

**ಶ್ರೀ.ಶರಣಯ್ಯ ದ್ವಿದಸ ಇವರ ಮೇಲಿನ ಆಪಾದನೆ, ವಿಚಾರಣಾ ವರದಿ ಮತ್ತು ಅವರ ಲಿಖಿತ ಹೇಳಿಕೆ ಈ ಕೆಳಕಂಡಂತಿದೆ:**

**ಆಪಾದನೆ:**1:- ಶ್ರೀ.ನಸೀರ್ ಅಹ್ಮದ್, ಇವರು ಹಬ್ಬದ ಮುಂಗಡಕ್ಕಾಗಿ ಅರ್ಜಿ ಸಲ್ಲಿಸದಿದ್ದರೂ ಈ ಬಾಬ್ತು 2000-00 ರೂ.ಗಳನ್ನು ಡ್ರಾ ಮಾಡಿ ಸ್ವಂತಕ್ಕೆ ದುರ್ಬಳಕೆ ಮಾಡಿಕೊಂಡಿದ್ದಾರೆ.

**ಆಪಾದನೆ:**2:- 1-8-2000ರಿಂದ 31-12-2000ರವರೆಗೆ ಸಿಬ್ಬಂದಿ ವೇತನದಲ್ಲಿ 5,62,663-00 ರೂ.ಗಳನ್ನು ಹೆಚ್ಚುವರಿ ಡ್ರಾ ಮಾಡಿ ಸ್ವಂತಕ್ಕೆ ದುರ್ಬಳಕೆ ಮಾಡಿಕೊಂಡಿದ್ದಾರೆ.

**ಆಪಾದನೆ:3:-** ಜೂನ್ 2001ರಿಂದ ಜನವರಿ 2002ರವರೆಗೆ ಸಿಬ್ಬಂದಿಯ ಸಾಮಾನ್ಯ ಭವಿಷ್ಯನಿಧಿಯಲ್ಲಿ 36,000-00 ರೂ.ಗಳನ್ನು ಅಕ್ರಮವಾಗಿ ಪಡೆದು ನೌಕರರಿಗೆ ವಂಚಿಸಿ ಸದರಿ ಹಣವನ್ನು ಸ್ವಂತಕ್ಕೆ ದುರ್ಬಳಕೆ ಮಾಡಿಕೊಂಡಿದ್ದಾರೆಂಬ ಬಗ್ಗೆ.

**ವಿಚಾರಣಾಧಿಕಾರಿಗಳ ವರದಿ:** ಶ್ರೀ.ಶರಣಯ್ಯ ಇವರು ಸದರಿ ಕಾರ್ಯಾಲಯಕ್ಕೆ ಕರ್ತವ್ಯಕ್ಕೆ ಹಾಜರಾದ ಮೇಲೆ ಖಾಯಂ ಸಿಬ್ಬಂದಿಗಳ ಸಂಕಲನ ಶಾಖೆಯ ಕೆಲಸವನ್ನು ವಹಿಸಿಕೊಂಡು ಮೊದಲನೇ ತಿಂಗಳಲ್ಲೇ ಹೆಚ್ಚುವರಿಯಾಗಿ 12,159-00ಗಳನ್ನು ಡ್ರಾ ಮಾಡಿದ್ದಾರೆ. ಇವರು ಅಲ್ಲಿಗೆ ಬಂದಮೇಲೆ ಇಂತಹ ಪ್ರಕರಣಗಳು ಪ್ರಾರಂಭವಾಗಿವೆ ಎನ್ನುವುದು ಗಮನಾರ್ಹ ಅಂಶ. ಇವರೇ ಇಂತಹ ಕಾರ್ಯವನ್ನು ಮಾಡಿ ಅಧಿಕಾರಿಗಳಿಗೆ ಮತ್ತು ಸರ್ಕಾರಕ್ಕೆ ಮೋಸ ಮಾಡಿದ್ದಾರೆ. 28 ತಿಂಗಳ ಅವಧಿಗೆ ನಿರಂತರವಾಗಿ ಹೆಚ್ಚುವರಿ ಹಣ ಡ್ರಾ ಮಾಡಿದ್ದು ಒಂದು ಭಾರಿಯೂ ಖಜಾನೆಯಿಂದ ಬಿಲ್ಲು ಹಿಂದಕ್ಕೆ ಬಂದಿಲ್ಲ, ಆಕ್ಷೇಪವಾಗಿರುವುದಿಲ್ಲ ತಿದ್ದುಪಡಿ ಮಾಡಿ ಹಣ ಕಡಿತಗೊಳಿಸಿಲ್ಲ. ಖಜಾನೆ ಅಧಿಕಾರಿಗಳು ಸಹ ಈ ವಿಷಯದಲ್ಲಿ ಜವಾಬ್ದಾರಿಯಿಂದ ಕೆಲಸ ನಿರ್ವಹಿಸಿಲ್ಲ. ಕೆಲವೊಂದು ದಾಖಲೆಗಳಲ್ಲಿ ಖಜಾನೆಗೆ ಸಲ್ಲಿಸಿದ್ದ ಬಿಲ್ಲು, ಬಿಲ್ಲಿನಲ್ಲಿರುವ ಹಣ, ಖಜಾನೆಯಿಂದ ನೀಡಲಾದ ಚೆಕ್ ಮತ್ತು ಚೆಕ್‌ನ ಪ್ರಕಾರ ಎಲ್ಲಾವೂ ಸರಿಯಿದ್ದು, ವೇತನ ಬಿಲ್ಲುಗಳು ಮಾತ್ರ ಮೊದಲು ಇರುವ ದಾಖಲೆಯ ನಮೂದನೆ ಮೇಲೆ ಬಿಳಿ ಬಣ್ಣ ಬಳಿದು ಸದರಿ ಹಣವನ್ನು ಕಡಿಮೆ ನಮೂದಿಸಿದ್ದಾರೆ. ಮೊದಲು ಇರುವ ಅಂಕಿ ಅಂಶಗಳು ಪುಟದ ಹಿಂಭಾಗದಲ್ಲಿ ನೋಡಿದರೆ ಸ್ಪಷ್ಟವಾಗಿ ಗೊತ್ತಾಗುತ್ತದೆ. ಇದು ಶ್ರೀ.ಶರಣಯ್ಯ ಇವರ ದುರುದ್ದೇಶವನ್ನು ಖಚಿತಪಡಿಸುತ್ತದೆ. ಉದಾಹರಣೆಗೆ 40,788-00ರೂ.ಗಳ ಚೆಕ್ ಪಡೆದು ಗಳಿಕೆ ರಜೆ ನಗದೀಕರಣ ಬಿಲ್ಲಿನಲ್ಲಿ ನಂತರ ಬಣ್ಣ ಹಚ್ಚಿ 33,526-00 ಎಂದು ನಮೂದಿಸಲಾಗಿದೆ. ಮೇಲಾಧಿಕಾರಿಗಳ ಸಹಿ ಆದ ಮೇಲೆ ಅಂಕಿಅಂಶಗಳನ್ನು ತಿದ್ದಿದ್ದಾರೆ. ಅಕ್ಷರಗಳು ಶ್ರೀ.ಶರಣಯ್ಯ, ಇವರ ಅಕ್ಷರಗಳಾಗಿರುತ್ತವೆ. ಇವು ನಿಜವಾದ ತಪ್ಪುಗಳಾದಲ್ಲಿ ತಿದ್ದುಪಡಿಗೆ ಮೇಲಾಧಿಕಾರಿಗಳ ದೃಡೀಕರಣ ಪಡೆಯಬೇಕಾಗಿತ್ತು. ಈ ರೀತಿ ಅಕ್ರಮಗಳು ನಡೆಯುತ್ತಿದ್ದಾಗ ನೌಕರನೊಬ್ಬನ ಹಬ್ಬದಮುಂಗಡ 2000-00ರೂ.ಗಳು ಪಾವತಿ ಆಗದ್ದರಿಂದ ಅವನು ಈ ಕುರಿತು ಮೇಲಾಧಿಕಾರಿಗಳಿಗೆ ವಿನಂತಿಸಿದಾಗ ಈ ಹಗರಣ ಬೆಳಕಿಗೆ ಬಂದಿದೆ. ವಿಚಾರಣೆಯ ಸಮಯದಲ್ಲಿ ಶ್ರೀ.ಶರಣಯ್ಯ ಇವರೇ Acquitance Rollನ ಕೆಳಭಾಗದ ಒಟ್ಟು ಮೊತ್ತವನ್ನು ನಮೂದಿಸುವಾಗ ಹೆಚ್ಚುವರಿ ಅಂಕಿ ಅಂಶಗಳನ್ನು ನಮೂದಿಸಿ ಹೆಚ್ಚುವರಿ ಹಣ ಪಡೆದು ಸಿಬ್ಬಂದಿಗೆ ಸಲ್ಲಬೇಕಾದ ವೇತನ ನೀಡಿದ ನಂತರ ಉಳಿದ ಹೆಚ್ಚುವರಿ ಮೊತ್ತವನ್ನು ಸ್ವಂತಕ್ಕೆ ಪಡೆದುಕೊಂಡಿದ್ದಾರೆ. ಇದು ನಿಜ ಎಂದು ವಿಚಾರಣೆಯಲ್ಲಿ ಒಪ್ಪಿಕೊಂಡಿದ್ದಾರೆ. ಮೇಲಾಧಿಕಾರಿಗಳು ಅದರಲ್ಲಿ ತಮಗೆ 3000-00 ರೂ.ಗಳನ್ನು ನೀಡುತ್ತಿದ್ದರು ಎಂದು ತಿಳಿಸಿದ್ದಾರೆ, ಹೆಚ್ಚುವರಿ ಹಣ ಡ್ರಾ ಮಾಡುವಲ್ಲಿನ ಎಲ್ಲಾ ಕೃತ್ಯಗಳನ್ನು ತಾವೇ ಜರುಗಿ ಸಿದ್ದಾಗಿ ಒಪ್ಪಿಕೊಂಡಿದ್ದಾರೆ. ಹಣ ಹಂಚಿಕೊಂಡಿದ್ದಕ್ಕೆ ಯಾವ ಸಾಕ್ಷಿಯೂ ಇಲ್ಲ. ಹಾಗಾಗಿ ಸಂಪೂರ್ಣ ಹಣವನ್ನು ಅವರೇ ತೆಗೆದುಕೊಂಡಿದ್ದಾರೆಂದು ಸ್ಪಷ್ಟವಾಗುತ್ತದೆ. ಅಧಿಕಾರಿಗಳು ಸಹಿ ಮಾಡಿದ ಮೇಲೆ ಬಿಳಿ ಬಣ್ಣ ಹಚ್ಚಿ ದಾಖಲೆಗಳನ್ನು ಇವರು ತಮ್ಮ ಕೈಬರಹದಲ್ಲಿ ತಿದ್ದಿದ್ದಾರೆ. ಈ ಎಲ್ಲಾ ಕೆಲಸಗಳನ್ನು ಇವರೇ ಖುದ್ದಾಗಿ ಮಾಡಿದ್ದಾರೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ.

**ಶ್ರೀ.ಶರಣಯ್ಯ ಇವರ ಲಿಖಿತ ಹೇಳಿಕೆ:** ನೋಟಿಸ್ ಸ್ವೀಕರಿಸಿದ ನಂತರ ಸದರಿ ನೋಟಿಸ್‌ನೊಂದಿಗೆ ವಿಚಾರಣಾ ವರದಿ ಬಂದಿಲ್ಲ ಎಂದು ತಿಳಿಸಿದ್ದರು. ಆ ಪ್ರಕಾರ ಅವರಿಗೆ ಪುನ:ವಿಚಾರಣಾ ವರದಿಯನ್ನು ಕಳುಹಿಸಿಕೊಡಲಾಗಿತ್ತು. ಅದನ್ನು ಅವರು 21-6-2005ರಂದು ಸ್ವೀಕರಿಸಿದ್ದಾರೆ. ನಂತರ ಅವರು ಯಾವುದೇ ಹೇಳಿಕೆ ಸಲ್ಲಿಸಿಲ್ಲ. ಆದರೆ, ನೋಟಿಸ್ ಸ್ವೀಕರಿಸಿದಾಗ ದಿ:12-2-05ರಂದು ಹೇಳಿಕೆ ಸಲ್ಲಿಸಿದ್ದು, ಅದರ ಸಂಕ್ಷಿಪ್ತ ವಿವರ ಈ ಕೆಳಕಂಡಂತಿದೆ: ತಾವೂ ಕಚೇರಿಯ ಹಣ ಪಡೆಯುವ ಅಧಿಕಾರಿ ಅಲ್ಲ ಸರ್ಕಾರಿ ಹಣ

ದುರುಪಯೋಗ ಮಾಡುವ ದುರಾಲೋಚನೆ ತಮ್ಮಲ್ಲಿಲ್ಲ. ತಾವೂ ತಯಾರಿಸಿದ ಬಿಲ್ಲನ್ನು ಅಧಿಕಾರಿಗಳು ಪರಿಶೀಲಿಸದೇ ಮೋಸ ವಂಚನೆಗೆ ಒಳಪಟ್ಟಿರುವುದರಿಂದ ಬಿಲ್ಲನ್ನು ಪರಿಶೀಲಿಸುವ ಪ್ರಶ್ನೆ ಉದ್ಭವಿಸದು. ಅಧಿಕಾರಿಗಳು ಬಿಲ್ಲನ್ನು ಪರಿಶೀಲಿಸಿ ದೃಢೀಕರಿಸಿರುತ್ತಾರೆ. ಅಧಿಕಾರಿಗಳು ಈ ಅವ್ಯವಹಾರದಲ್ಲಿ ನೇರ ಭಾಗಿಯಾಗಿದ್ದಾರೆ. ನಗದು ಪುಸ್ತಕ ಮಾಸಿಕ ಖರ್ಚಿನ ತನಿಖೆ, ಮಾಸಿಕ ಲೆಕ್ಕಪತ್ರಗಳನ್ನು ಅಧಿಕಾರಿಗಳು ದೃಢೀಕರಿಸಿರುತ್ತಾರೆ. KFC Article 3ರ ಪ್ರಕಾರ ಅಧಿಕಾರಿಗಳೇ ಅದಕ್ಕೆ ಸಂಬಂಧಪಟ್ಟಿರುತ್ತಾರೆ. ಇದು ಕೇವಲ ತಮ್ಮ ಒಬ್ಬರಿಂದ ಆದ ಘಟನೆಯಲ್ಲ. ತಮ್ಮ ಹೊರತು ಬೇರೆ ಸಿಬ್ಬಂದಿ ಮತ್ತು ಕಚೇರಿಯ ಮುಖ್ಯಸ್ಥರು ಶಾಮೀಲಾಗಿ ಅಪವಿತ್ರ ಹೊಂದಾಣಿಕೆಯಿಂದ ಈ ಅವ್ಯವಹಾರಕ್ಕೆ ಮುಂದಾಗಿದ್ದಾರೆ. ಸಂಬಂಧಪಟ್ಟ ಅವಧಿಯಲ್ಲಿ ದಾಖಲಾತಿಗಳಲ್ಲಿ ತನ್ನ ಹಸ್ತಾಕ್ಷರಗಳು ಇರುವುದು ನಿಜ. ಅವುಗಳು ಕಚೇರಿ ಮುಖ್ಯಸ್ಥರ ಉದ್ಘೋಷಣೆ ಶಬ್ಧಗಳ ಸರಣಿ ಎಂದು ಪರಿಗಣಿಸುವಂತೆ ಕೋರುತ್ತೇನೆ. ಈ ದಾಖಲೆಗಳನ್ನು ಅಧಿಕಾರಿಗಳು ಒಪ್ಪಿ ದೃಢೀಕರಿಸಿದ್ದಾರೆ. ವಿಚಾರಣಾಧಿಕಾರಿಗಳು ಯಾವ ರೀತಿ ವಿಚಾರಣೆ ಮಾಡಿದ್ದಾರೆ ಎಂಬುದು ತಮಗೆ ತಿಳಿಸಿದಲ್ಲ. ಮೇಲಿನ ಈ ಉತ್ತರವನ್ನು ಅವಗಾಹಿಸಿ ಅಧಿಕಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಸರ್ಕಾರವು ಆಪಾದಿತ ಅಧಿಕಾರಿಗಳು / ನೌಕರ ಇವರುಗಳು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ವಿಚಾರಣಾ ವರದಿಯನ್ನು ಅವಗಾಹಿಸಿದಲ್ಲಿ ಆಪಾದಿತ ನೌಕರನಾದ ಶ್ರೀ ಶರಣಯ್ಯ, ದ್ವಿ.ದ.ಸ. ಇವರು ದುರುದ್ದೇಶದಿಂದ ಈ ಕೃತ್ಯ ಎಸಗಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ ಮತ್ತು ಖಜಾನೆಯಿಂದ ಹಣ ಪಡೆಯುವ ಅಧಿಕಾರಿಗಳಾದ (1) ಶ್ರೀ ಎನ್.ಎಸ್.ಕುಕ್ಕುಂದ, (2) ಶ್ರೀ ಪಿ.ಆರ್. ಗುಂಡಾ, (3) ಶ್ರೀ ಸುಭಾಷ್ ಮರಕುಂದಿ, ಮತ್ತು (4) ಶ್ರೀ ಎಂ.ಕೃಷ್ಣಪ್ಪ ಇವರುಗಳು ಈ ಪ್ರಕರಣದಲ್ಲಿ ಸಾಕಷ್ಟು ನಿಗಾ ವಹಿಸಿ ಕರ್ತವ್ಯ ನಿರ್ವಹಿಸದೇ ತೀವ್ರ ಕರ್ತವ್ಯಲೋಪವೆಸಗಿರುವುದು ದೃಢಪಟ್ಟಿರುತ್ತದೆ. ಆದ್ದರಿಂದ, ಶ್ರೀ ಶರಣಯ್ಯ, ಇವರ ಮೇಲಿನ ಸಾಬೀತಾದ ಹಣ ದುರುಪಯೋಗ ಆಪಾದನೆಯ ತೀವ್ರತೆ ಮತ್ತು ಗಂಭೀರತೆಗೆ ಅನುಗುಣವಾಗಿ ಅವರಿಗೆ ಸೂಕ್ತ ದಂಡನೆ ವಿಧಿಸಲು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಯೊಂದಿಗೆ ವ್ಯವಹರಿಸಲು ನಿರ್ಧರಿಸಿದೆ ಹಾಗೂ ಇನ್ನುಳಿದ ಆಪಾದಿತ ಅಧಿಕಾರಿಗಳ ಕರ್ತವ್ಯ ಲೋಪಕ್ಕಾಗಿ ಈ ಕೆಳಕಂಡಂತೆ ದಂಡನೆ ವಿಧಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 40 ಇಎನ್‌ಕ್ಯೂ 04, ಬೆಂಗಳೂರು, ದಿನಾಂಕ: 3ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಯಾಂತ್ರಿಕ ಉಪ ವಿಭಾಗದಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದ (1) ಶ್ರೀ ಎನ್.ಎಸ್.ಕುಕ್ಕುಂದ, (2) ಶ್ರೀ ಪಿ.ಆರ್. ಗುಂಡಾ, (3) ಶ್ರೀ ಸುಭಾಷ್ ಮರಕುಂದಿ, ಮತ್ತು (4) ಶ್ರೀ ಎಂ. ಕೃಷ್ಣಪ್ಪ ಇವರುಗಳಿಗೆ ಸದರಿ ಉಪ ವಿಭಾಗದಲ್ಲಿ ಹಣ ದುರುಪಯೋಗವಾದ ಬಗ್ಗೆ ಸಾಬೀತಾದ ಆಪಾದನೆಯ ಪರಿಮಾಣಕ್ಕನುಗುಣವಾಗಿ ಅವರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವ.ನಿ.ಮೇ) ನಿಯಮಗಳು 1957 ರ ನಿಯಮ 8 (iii) ರಲ್ಲಿನಂತೆ ಅವರುಗಳು ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಎರಡು ವಾರ್ಷಿಕ ವೇತನ ಬಡ್ತಿಯನ್ನು ಶಾಶ್ವತವಾಗಿ ತಡೆ ಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಪಿ.ಆರ್. 172 ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಕ್ಕರೆ ಸಂಸ್ಥೆ , ಬೆಳಗಾಂ ಇದರ 2005-06ನೇ ಸಾಲಿನ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಬಾಕಿ ಇರುವ ರೂ. 25.00 ಲಕ್ಷಗಳನ್ನು ಮಂಜೂರು ಮಾಡಿ ಬಿಡುಗಡೆಗೊಳಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶಸಂಖ್ಯೆ:ಸಿಐ 154 ಎಸ್‌ಜಿಎಫ್ 05 ದಿನಾಂಕ:30.08.05
2. ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ರವರ ಪತ್ರ ಸಂಖ್ಯೆ: ಕಸಸಂ/ಆವ್ಯ/ಮಂ/ಕು:05-06/483 ದಿ:25.1.06

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿನ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆಗೆ 2005-06ನೇ ಸಾಲಿನಲ್ಲಿ ಒದಗಿಸಲಾದ ರೂ.50.00 ಲಕ್ಷ ಆಯವ್ಯಯದಲ್ಲಿ ರೂ.25.00 ಲಕ್ಷಗಳನ್ನು ಅನುದಾನವಾಗಿ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (2) ರಲ್ಲಿನ ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆಯ ರವರ ಪತ್ರದಲ್ಲಿ ಕರ್ನಾಟಕ ಸಕ್ಕರೆ ಸಂಸ್ಥೆ ಜಮೀನುಗಳಲ್ಲಿ ಅಭಿವೃದ್ಧಿ ಕೆಲಸಗಳನ್ನು ಕೈಗೊಳ್ಳುವುದರೊಂದಿಗೆ ಮೈಕ್ರೋ ಇರಿಗೇಷನ್ ವ್ಯವಸ್ಥೆಯನ್ನು (ಉಪಕರಣಗಳನ್ನು) ಹೊಂದಿ ಉತ್ತಮ ಗುಣಮಟ್ಟದ ಕಬ್ಬಿನ ಬೀಜಗಳನ್ನು ಬೆಳೆದು ರೈತರಿಗೆ ಹಂಚುವ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಳ್ಳಲಾಗಿದೆ. ಇದಲ್ಲದೆ, ವಿವಿಧ ಕಬ್ಬು ವ್ಯವಸಾಯ ಪ್ರಾತ್ಯಕ್ಷಿಕೆಗಳನ್ನು ಮತ್ತು ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕ್ಕೊಂಡಿದ್ದು, ಅವುಗಳನ್ನು ಕಾರ್ಯಗತಗೊಳಿಸಲು ಹಣಕಾಸಿನ ಅವಶ್ಯಕತೆ ಇರುತ್ತದೆ ಎಂದು ತಿಳಿಸಿ ಈ ಕೆಳಕಂಡ ಕಾರ್ಯಗಳಿಗೆ ತಗಲುವ ವೆಚ್ಚದ ವಿವರವನ್ನು ನೀಡಿದ್ದಾರೆ.

1. ಪಂಪ್‌ಹೌಸ್- 2ಶೆಡ್ ಕಟ್ಟಡಕ್ಕಾಗಿ (ಝಾಡಶಹಾಪುರ ಫಾರ್ಮ್) ರೂ 1,00,000.00
2. ಕಬ್ಬಿನ ಬೀಜ ನಾಟಿ ಮಾಡುವ ಕುರಿತು.

| | | |
|---|---|---|
| ಅ) ಝಾಡಶಹಾಪುರ ಫಾರ್ಮ್ | ರೂ.3,29,400.00 | |
| ಆ) ಬೆಳಗುಂದಿ ಫಾರ್ಮ್ | ರೂ.15,26,000.00 | |
| ಇ) ಸಾತನೂರು ಫಾರ್ಮ್ | ರೂ. 5,40.000.00 | ರೂ.23,95,400.00 |
| 3. ಬೆನಕನಹಳ್ಳಿ ಫಾರ್ಮ್-ಅಭಿವೃದ್ಧಿ ಕುರಿತು | | ರೂ. 7,00,000.00 |
| 4. ಆಡಳಿತಾತ್ಮಕ ವೆಚ್ಚ (ಪಗಾರ, ಪ್ರವಾಸ, ವಿದ್ಯುತ್, ಇಂಧನ ಹಾಗೂ ತರಬೇತಿ ವಗೈರೆ ಮಾರ್ಚ್2006 ರವರೆಗೆ) | | ರೂ. 5,00,000.00 |
| | | **ರೂ.36,95,400.00** |

ಈ ಮೇಲ್ಕಂಡ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಹಣಕಾಸಿನ ಅವಶ್ಯಕತೆ ಇದೆ ಎಂದು ತಿಳಿಸಿ ಮತ್ತು ಈ ಹಿಂದೆ ಉಲ್ಲೇಖ (1) ರಲ್ಲಿನ ಆದೇಶದಲ್ಲಿ ಬಿಡುಗಡೆ ಮಾಡಿದ ರೂ. 25.00 ಲಕ್ಷಗಳಲ್ಲಿ ಈಗಾಗಲೇ ರೂ.12,84,598.50 ಲಕ್ಷಗಳನ್ನು ಖರ್ಚು ಮಾಡಲಾಗಿದ್ದು 2005-06ನೇ ಸಾಲಿನ ಆಯವ್ಯಯದಲ್ಲಿ ನಿಗಧಿಗೊಳಿಸಿರುವ ರೂ. 50.00 ಲಕ್ಷಗಳಲ್ಲಿ ಬಾಕಿ ಇರುವ ರೂ.25.00 ಲಕ್ಷಗಳನ್ನು ಮೇಲ್ಕಂಡ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಮಂಜೂರು ಮಾಡಿ ಬಿಡುಗಡೆ ಮಾಡಬೇಕೆಂದು ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರು ಕೋರಿದ್ದಾರೆ.

ಕರ್ನಾಟಕ ಸಕ್ಕರೆ ಸಂಸ್ಥೆಯ ನಿರ್ದೇಶಕರು ರವರ ಪತ್ರ ದಿನಾಂಕ:25.01.06 ರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 154 ಎಸ್‌ಜಿಎಫ್ 05, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2006**

ನಿರ್ದೇಶಕರು ಕರ್ನಾಟಕ ಸಕ್ಕರೆ ಸಂಸ್ಥೆ ಬೆಳಗಾಂ ರವರು ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇದಕ್ಕೆ 2005-06ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2852-08-201-0-01 ರಡಿಯಲ್ಲಿ ಒದಗಿಸಲಾಗಿದ್ದ ರೂ. 50.00 ಲಕ್ಷಗಳಲ್ಲಿ ಬಾಕಿ ಇರುವ ರೂ. 25.00 ಲಕ್ಷಗಳ (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಅನುದಾನವನ್ನು ಮಂಜೂರು ಮಾಡಿ ಬಿಡುಗಡೆ ಮಾಡಿದೆ.

ಹಣ ಸಂದಾಯದ ರಸೀದಿ ಮೇಲೆ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಮೇಲು ರುಜು ಪಡೆದು ಸದರಿ ಹಣವನ್ನು ಖಜಾನೆಯಿಂದ ಡ್ರಾ ಮಾಡುವ ಅಧಿಕಾರವನ್ನು ನಿರ್ದೇಶಕರು, ಕರ್ನಾಟಕ ಸಕ್ಕರೆ ಸಂಸ್ಥೆ, ಬೆಳಗಾಂ ಇವರಿಗೆ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ-1-ಟಿಎಫ್‌ಪಿ 2003 ದಿನಾಂಕ:12.06.2003 ರಲ್ಲಿ ಸರ್ಕಾರದ ಆಡಳಿತ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 284

## ಶಿಕ್ಷಣ ಸಚಿವಾಲಯ

**ವಿಷಯ:** ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, 2005-06ನೇ ಸಾಲಿಗೆ ರೂ. 10.00 ಲಕ್ಷಗಳನ್ನು ಪುನರ್ ವಿನಿಯೋಗ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ರಾ.ಶಿ.ಸ. & ತ.ಇ. ಅವರ ಪ್ರಸ್ತಾವನೆ ಸಂಖ್ಯೆ: ರಾವಿಸಂ1(4) ವಿ.ಕೇ.ಅನುದಾನ 22/05-06 ದಿನಾಂಕ: 29.12.2005.

**ಪ್ರಸ್ತಾವನೆ:**

ನಿರ್ದೇಶಕರು, ಡಿ.ಎಸ್.ಇ.ಆರ್.ಟಿ. ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ: 29.12.2005ರ ತಮ್ಮ ಪ್ರಸ್ತಾವನೆಯಲ್ಲಿ 2005-06ನೇ ಸಾಲಿಗೆ ಯೋಜನೆ ಲೆಕ್ಕ ಶೀರ್ಷಿಕೆ 2202-80-800-0-06-059 ರಲ್ಲಿ ರೂ. 20.00 ಲಕ್ಷ ಅನುದಾನ ಒದಗಿಸಲಾಗಿದ್ದು, ಸದರಿ ಅನುದಾನವನ್ನು ಪೂರ್ಣವಾಗಿ ವಿವಿಧ ವಿಜ್ಞಾನ ಚಟುವಟಿಕೆಗಳಿಗೆ ಹಾಗೂ ವಿಜ್ಞಾನ ಕೇಂದ್ರಗಳ ನಿರ್ವಹಣೆಗೆ ಖರ್ಚು ಮಾಡಲಾಗಿದೆ. ಆದರೆ ವಿಜ್ಞಾನ ಕೇಂದ್ರಗಳಿಗೆ ಬಿಡುಗಡೆ ಮಾಡಲಾದ ಅನುದಾನವು ಬಹಳ ಕಡಿಮೆ ಆಗಿದ್ದು ಇನ್ನು ಹೆಚ್ಚಿನ ಅನುದಾನ ಅಗತ್ಯವಿರುತ್ತದೆ ಎಂದು ತಿಳಿಸಿರುತ್ತಾರೆ.

ಇದೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2202-80-800-0-07-059 (ಯೋಜನೆ) ರೂ.40.00 ಲಕ್ಷಗಳ ಆಯವ್ಯಯ ಒದಗಿಸಲಾಗಿದೆ. ಈ ಆಯವ್ಯಯದಲ್ಲಿ ಸ್ಟೇಷನರಿ ಮತ್ತು ಉಪಕರಣಗಳ ಖರೀದಿಗೆ ನಿಗದಿಪಡಿಸಿರುವ ರೂ.10.00 ಲಕ್ಷಗಳಲ್ಲಿ ರೂ. 5.00 ಲಕ್ಷಗಳು ಒಟ್ಟು ರೂ.10.00- ಲಕ್ಷಗಳನ್ನು ರಾಜ್ಯ ವಿಜ್ಞಾನ ಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮಕ್ಕೆ ಉಪಯೋಗಿಸಿಕೊಳ್ಳಲು ಲೆಕ್ಕ ಶೀರ್ಷಿಕೆ 2202-80-800-0-07-059 (ಯೋಜನೆ) ರಿಂದ ರೂ.10.00 ಲಕ್ಷಗಳನ್ನು ಲೆ.ಶಿ. 2202-80-800-0-06-059 (ಯೋಜನೆ) ಲೆಕ್ಕ ಶೀರ್ಷಿಕೆಗೆ ಮರು ಹೊಂದಾಣಿಕೆಗೆ ಸರ್ಕಾರದ ಅನುಮೋದನೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 3 ಯೋಯೋಕಾ 2006, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2006**
**(ಇಡಿ 13 ಸ್ವೀಮರ (ಯೂನಿಕ್) 2006, ದಿನಾಂಕ: 20ನೇ ಫೆಬ್ರವರಿ 2006)**

ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಗೆ 2005-06ನೇ ಸಾಲಿಗೆ ಲೆ.ಶಿ.2202-80-0-07-059 (ಯೋಜನೆ) ಇತರೆ ಖರ್ಚು ಅಡಿಯಲ್ಲಿ ಉಳಿತಾಯವಾಗುವ ಮೊತ್ತ ರೂ.10.00 ಲಕ್ಷಗಳನ್ನು ಲೆ.ಶಿ. 2202-80-800-0-06-059 (ಯೋಜನೆ) ಇತರೆ ಖರ್ಚು ಅಡಿಯಲ್ಲಿ ಮರು ಹೊಂದಾಣಿಕೆ ಮಾಡಲು ಈ ಮೂಲಕ ಅನುಮೋದನೆ ನೀಡುತ್ತದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅಡಿ ಸಂಖ್ಯೆ:ಇಡಿ 27 ಐಎಸ್ (ಬಿಎ)2006 ದಿ.30.1.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ

**FORM 22A**
**(Article 309)**
**Education Department**

**Re-appropriation Statement to accompany all applications for sanction to expenditure not provided for the in budget, or for additional allotments**

| Major, Minor, Sub-and Detailed Heads of Budget (The same Details must be given as in the printed Budget Estimate) | Heads of estimate proposed to be increased | | | | Heads of estimate proposed to be reduced | | | | Remarks: (Here state fully the reasons for allotment and for anticipating savings |
|---|---|---|---|---|---|---|---|---|---|
| | Amount as in the sanctioned Budget estimate | Actual expenditure up-to-date viz. | Probable expenditure during remainder of the year | Amount of additional allotment required | Amount as in the sanctioned estimate | Actual expenditure up-to-date viz. | Probable expenditure during remainder of the year | Amount available for re-appropriation | |
| 2202-80-800-0-07-059 | | | | | 40.00 | 21.33 | 8.67 | 10.00 | ಡಿ.ಎಸ್.ಇ.ಆರ್.ಟಿ. ನಿರ್ವಹಣಾ ಆಯವ್ಯಯದಲ್ಲಿ ಯಾವುದೇ ಖರೀದಿ ಇಲ್ಲದಿರುವುದರಿಂದ 10 ಲಕ್ಷ ಉಳಿತಾಯವಾಗುತ್ತದೆ. ಇದೇ ಹಣ ವಿಜ್ಞಾನ ಕೇಂದ್ರಗಳ ನಿರ್ವಹಣೆಗಾಗಿ ಬಳಸಲು ಉದ್ದೇಶಿಸಿದೆ. |
| 2202-80-800-0-06-059 | 20.00 | 16.40 | 13.60 | 10.00 | | | | | |
| | | | | | | | | | |

**NOTE:** Any further explanations should be given on the reverse.

Station: ................
Date: ...................
P.R. 285

**K. SRIKANTESHWARA**
Special Officer and Ex-officio Joint Secretary
(Planning) Education Department.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಬಿ. ಸಂಪತ್ತುಕುಮಾರ್, ಹಿಂದಿನ ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು ಹಾಲಿ ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ಕಮೀತ್ಕರ್, ಹಿಂದಿನ ಗ್ರಾಮ ಲೆಕ್ಕಿಗರು (ಪ್ರಭಾರ) ಹಾಲಿ ಪ್ರ.ದ.ಸ. ಪ್ರಾಥಮಿಕ ಆರೋಗ್ಯ ಘಟಕ, ಸಿಂಗಸಂದ್ರ ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ದಿನಾಂಕ: 3.11.04ರ ಪತ್ರ ಸಂಖ್ಯೆ:ಸಿಬ್ಬಂದಿ(2) ಸಿಸಿಎ ಸಿಆರ್/3/2003-04.
2. ದಿನಾಂಕ:5.5.2005ರ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ 13 ಎಡಿಇ 2005.
3. ಆಪಾದಿತರು ಲಿಖಿತ ಉತ್ತರ: 1) ಶ್ರೀ ಬಿ. ಸಂಪತ್ತುಕುಮಾರ್, ತಹಶೀಲ್ದಾರ್- ಸಲ್ಲಿಸಿರುವುದಿಲ್ಲ.
   2) ಶ್ರೀ ಕಮೀತ್ಕರ್, ಪ್ರ.ದ.ಸ.- ದಿನಾಂಕ:12.9.2005.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ ಬೈರಪ್ಪನಹಳ್ಳಿ ಗ್ರಾಮದ ಸ.ನಂ.16ರ ಪೈಕಿ 4-00 ಎಕರೆ ಜಮೀನು ಶ್ರೀ ನಂದೀಶಯ್ಯ ಎಂಬುವರಿಗೆ ನಂ.ಬಿಡಿಎ ದ4/60-4152-53ರಲ್ಲಿ ಮಂಜೂರಾಗಿ ಕ್ರಯ ವಿಕ್ರಯಗಳಾಗಿ ಅಂತಿಮವಾಗಿ ರಿ.ಪತ್ರ ಸಂ:812/77-78, ದಿನಾಂಕ:7.7.97ರ ಕ್ರಯ ಪತ್ರದಂತೆ ಎಂ.ಆರ್.10/77-78ರಲ್ಲಿ ಶ್ರೀ ಚೆಲ್ಲಂರಾಜರತ್ನಂ ಬಿನ್ ಟಿ.ಎಸ್. ರಾಜರತ್ನಂ ಎಂಬುವವರ ಹೆಸರಿಗೆ ಪಹಣಿಯಾಗಿದ್ದರೂ, ನಂದೀಶಯ್ಯ ಫವತಿಯಾಗಿದ್ದು, ಇವರ ಮಗ ಎಸ್.ಎನ್. ಚಂದ್ರಶೇಖರಯ್ಯ ಎಂಬ ಅನಧಿಕೃತ ವ್ಯಕ್ತಿ ನೀಡಿದ ಖೋಟಾ ದಾಖಲೆಗಳ ಆಧಾರದ ಮೇಲೆ ಪೂರ್ವಾಪರ ಪರಿಶೀಲಿಸದೇ ಆರ್.ಆರ್.ಟಿ. ಸಿಆರ್ 1382/99-2000, ದಿನಾಂಕ: 14.1.2000ರಂತೆ ಪ್ರಶ್ನಿತ ಜಮೀನುಗಳಿಗೆ ಐಹೆಚ್‌ಸಿ 1/99-2000ರಂತೆ ಫವತಿ ಖಾತೆ ಮಾಡಿ ಬನ್ನೇರುಘಟ್ಟ ನ್ಯಾಷನಲ್ ಪಾರ್ಕಿಗೆ ಭೂಸ್ವಾಧೀನವಾಗಿರುವ ಈ ಜಮೀನುಗಳ ವಿಸ್ತೀರ್ಣಕ್ಕೆ ಪರಿಹಾರ ಮೊತ್ತ 4,35,276/- ರೂಗಳನ್ನು ಯಾವುದೇ ನೈಜ ದಾಖಲೆಗಳನ್ನು ಹೊಂದದ ಅನಧಿಕೃತ ವ್ಯಕ್ತಿ ಶ್ರೀ ಎಸ್.ಎನ್. ಚಂದ್ರಶೇಖರಯ್ಯನವರು ಈ ಹಣವನ್ನು ಪಡೆಯಲು ನಕಲಿ ದಾಖಲೆಗಳನ್ನು ಸೃಷ್ಟಿಸಿ ಕರ್ತವ್ಯಚ್ಯುತಿ ಎಸಗಿರುತ್ತಾರೆಂದು ಆಪಾದಿಸಲಾದ ಶ್ರೀ ಬಿ. ಸಂಪತ್ತುಕುಮಾರ್, ಹಿಂದಿನ ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು ಹಾಲಿ ತಹಶೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು ಹಾಗೂ ಶ್ರೀ ಕಮೀತ್ಕರ್, ಹಿಂದಿನ ಗ್ರಾಮ ಲೆಕ್ಕಿಗರು (ಪ್ರಭಾರ) ತಾಲ್ಲೂಕು ಕಛೇರಿ, ಆನೇಕಲ್ ತಾಲ್ಲೂಕು ಹಾಲಿ ಪ್ರಥಮ ದರ್ಜೆ ಸಹಾಯಕ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರ.ಸಂ (1)ರ ದಿನಾಂಕ:3.11.04ರ ಪತ್ರದಲ್ಲಿ ಬೆಂಗಳೂರು ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಅಧಿಕಾರಿ/ನೌಕರರ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು (ಅನುಬಂಧ 1-4ರವರೆಗೆ) ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿ:5.5.05ರ ಕಾರಣ ಕೇಳುವ ನೋಟೀಸಿನೊಂದಿಗೆ ಇಬ್ಬರಿಗೂ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಆದರೆ ಶ್ರೀ ಬಿ. ಸಂಪತ್ತುಮಾರ್, ತಹಶೀಲ್ದಾರ್‌ರವರು ಸದರಿ ಕಾರಣ ಕೇಳುವ ನೋಟೀಸಿನಲ್ಲಿ ನಿಗದಿಪಡಿಸಿದ ದಿನಾಂಕ ಮುಗಿದಿದ್ದರೂ ಇಂದಿನವರೆಗೂ ಅವರ ಲಿಖಿತ ಉತ್ತರವನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಆದುದರಿಂದ ಸದರಿ ನೋಟೀಸಿನಲ್ಲಿ ಸ್ಪಷ್ಟಪಡಿಸಿರುವಂತೆ ನಿಗದಿತ ದಿನಾಂಕದೊಳಗೆ ಅವರ ಲಿಖಿತ ಉತ್ತರವನ್ನು ಸಲ್ಲಿಸಿರುವುದಿಲ್ಲವಾದ್ದರಿಂದ ಈ ಬಗ್ಗೆ ಅವರು ಹೇಳುವುದೇನೂ ಇಲ್ಲವೆಂದು ಭಾವಿಸಿ ಅವರ ವಿರುದ್ಧ ಏಕಪಕ್ಷೀಯವಾಗಿ ಮುಂದಿನ ಶಿಸ್ತು ಕ್ರಮ ಜರುಗಿಸಲು ತೀರ್ಮಾನಿಸಿದೆ ಇನ್ನೊಬ್ಬರು ಆಪಾದಿತರೆಂದು, ಹೇಳಲಾಗಿರುವ ಶ್ರೀ ಕಮೀತ್ಕರ್ ರವರು ಸಲ್ಲಿಸಿರುವ ಮೇಲೆ ಕ್ರ.ಸಂ(3)ರಲ್ಲಿ ಓದಲಾದ ದಿ:1.9.2005ರ ಲಿಖಿತ ಉತ್ತರದಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗಳೆದಿರುತ್ತಾರೆ. ಆದುದರಿಂದ ಮೇಲೆ ತಿಳಿಸಿದ ಇಬ್ಬರು ನೌಕರರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 13 ಎಡಿಇ 2005, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಶ್ರೀ ಬಿ. ಸಂಪತ್ಕುಮಾರ್, ಹಿಂದಿನ ವಿಶೇಷ ತಹಶೀಲ್ದಾರ್, ಆನೇಕಲ್ ತಾಲ್ಲೂಕು, ಹಾಲಿ ತಹಶೀಲ್ದಾರ್, ದೊಡ್ಡ ಬಳ್ಳಾಪುರ ತಾಲ್ಲೂಕು ಮತ್ತು ಶ್ರೀ ಕಮೀತ್ಕರ್, ಹಿಂದಿನ ಗ್ರಾಮ ಲೆಕ್ಕಿಗ (ಪ್ರಭಾರ) ತಾಲ್ಲೂಕು ಕಛೇರಿ, ಆನೇಕಲ್, ಹಾಲಿ ಪ್ರಥಮ ದರ್ಜೆ ಸಹಾಯಕ ಪ್ರಾಥಮಿಕ ಆರೋಗ್ಯ ಘಟಕ ಸಿಂಗಸಂದ್ರ ಬೆಂಗಳೂರು ದಕ್ಷಿಣ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಬಿ.ಕೆ. ಕಣವಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.1278, 3ನೇ ಅಡ್ಡರಸ್ತೆ, ನ್ಯಾಯಾಧೀಶರ ಬಡಾವಣೆ, ಜಿ.ಕೆ.ವಿ.ಕೆ. ಅಂಚೆ, ಬೆಂಗಳೂರು-560065 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ವಿಚಾರಣೆ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4.3.2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ನಗರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 11 ಮತ್ತು 11-ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 286

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಹೆಚ್.ಪಿ.ನಾಗರಾಜ,ಹಿಂದಿನ ತಹಶೀಲ್ದಾರ್, ಹೊಳಲ್ಕೆರೆ ತಾಲ್ಲೂಕು ಹಾಲಿ ತಹಶೀಲ್ದಾರ್,ರಾಣಿಬೆನ್ನೂರು ತಾಲ್ಲೂಕು ಹಾವೇರಿ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾಧಿಕಾರಿ,ಚಿತ್ರದುರ್ಗ ಜಿಲ್ಲೆ ಇವರ ದಿ:26-11-02ರ ಅ.ಸ.ಪ.ಸಂಖ್ಯೆ:ಪಿಎಡಿಸಿ/ ಸಿಆರ್/109/ 2002-03 ಮತ್ತು ದಿ:20-11-2004ರ ಅ.ಸ.ಪ.ಸಂಖ್ಯೆ:ಸಿಸಿಎ/ಸಿಆರ್/ 5/02-03.
2. ದಿ:07-12-2004ರ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ 64 ಎಡಿಇ:02
3. ಶ್ರೀ ಹೆಚ್.ಪಿ.ನಾಗರಾಜ್‌ರವರ ದಿ:24-12-04ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ.ನಾಗರಾಜ,ಹಿಂದಿನ ತಹಶೀಲ್ದಾರ್,ಹೊಳಲ್ಕೆರೆ ತಾಲ್ಲೂಕು ಹಾಲಿ ತಹಶೀಲ್ದಾರ್ ರಾಣಿಬೆನ್ನೂರು ತಾಲ್ಲೂಕು ಇವರು ಹೊಳಲ್ಕೆರೆ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರ ವಿರುದ್ಧ ಬಂದಿದ್ದ ದೂರು ಅರ್ಜಿಯನ್ನು ಪರಿಶೀಲಿಸಿದ ಚಿತ್ರದುರ್ಗ ಜಿಲ್ಲೆಯ ಅಂದಿನ ಜಿಲ್ಲಾಧಿಕಾರಿಗಳು ಶ್ರೀ ಹೆಚ್.ಪಿ.ನಾಗರಾಜ ರವರು 1961-62ರಲ್ಲಿ ಹಿರಿಯೂರಿನ ಸರ್ಕಾರಿ ಪ್ರಾಥಮಿಕ ಶಾಲೆಗೆ ಸೇರಿದಾಗ ದಾಖಲಾತಿ ವಹಿಯಲ್ಲಿ ``ನಾಯ್ಕರು'' ಎಂದು ಬರೆದಿದ್ದನ್ನು ತಿದ್ದಿ(tamper) ``ನಾಯಕ'' ಎಂದು ಬರೆದಿರುವುದು ಹಾಗೂ ಇಂತಹ ಅಕೃತ್ಯವನ್ನು ಸರ್ಕಾರಿ ನೌಕರಿ ಪಡೆಯುವ ಸಲುವಾಗಿ ಮಾಡಿ ಸರ್ಕಾರಿ ಸೇವೆಗೆ ಸೇರಿರುವುದಲ್ಲದೆ ನೌಕರಿಯಲ್ಲಿ ಪದೋನ್ನತಿ ಪಡೆಯಲು ಅವರ ಅಧಿಕಾರ ದುರುಪಯೋಗ ಮಾಡಿದ್ದಲ್ಲದೆ ಅವರಿಗೆ ಉಪಯೋಗವಾಗುವ ರೀತಿಯಲ್ಲಿ ಸದರಿ ಅಧಿಕಾರಿ ಹಿಂದೆ ಅಭ್ಯಾಸ ಮಾಡುತ್ತಿದ್ದ ಶಾಲೆಗಳಲ್ಲಿ ಅಧಿಕಾರಿಗಳಿಗೆ ಒತ್ತಡ ತಂದು ದಾಖಲೆಗಳನ್ನು ತಿದ್ದಿಸಿ ಆ ಪ್ರತಿಗಳೇ ಮೂಲ ಪ್ರತಿಗಳೆಂದು ಹೇಳುವಂತೆ ಮಾಡಿ ಸರ್ಕಾರಕ್ಕೆ ವಂಚಿಸಿರುತ್ತಾರೆಂದು ಮೇಲೆ ಕ್ರ.ಸಂ(1)ರಲ್ಲಿ ಓದಲಾದ ದಿ:26-11-2002ರ ಅ.ಸ.ಪತ್ರದಲ್ಲಿ ಚಿತ್ರದುರ್ಗ ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ. ದಿ:20-11-04ರ ತಮ್ಮ ಅ.ಸ.ಪತ್ರದೊಂದಿಗೆ ಜಿಲ್ಲಾಧಿಕಾರಿಗಳು ಸದರಿ ಅಧಿಕಾರಿಯ ವಿರುದ್ಧದ ದೋಷಾರೋಪಣೆ ಪಟ್ಟಿಗಳನ್ನು ಕಳುಹಿಸಿ (ಅನುಬಂಧ 1-4ರವರೆಗೆ) ಶ್ರೀ ಹೆಚ್.ಪಿ.ನಾಗರಾಜ ರವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಚಿತ್ರದುರ್ಗ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಹೆಚ್.ಪಿ.ನಾಗರಾಜ ರವರ ವಿರುದ್ಧದ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವ ರೀತಿಯಲ್ಲಿ ಇರುವುದರಿಂದ ಆಪಾದಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ,ಇವರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1-4ರವರೆಗೆ) ಮೇಲೆ ಕ್ರ.ಸಂ(2)ರಲ್ಲಿ ಓದಲಾದ ದಿನಾಂಕ: 07-12-04ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಹೆಚ್.ಪಿ.ನಾಗರಾಜ ರವರು ಮೇಲೆ ಕ್ರ.ಸಂ(3)ರಲ್ಲಿ

ಓದಲಾದ ದಿನಾಂಕ:24-12-04ರ ಲಿಖಿತ ಉತ್ತರವನ್ನು ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ, ಸದರಿ ಅಧಿಕಾರಿಯ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ. ಹಾಗೂ ಅವರ ವಿರುದ್ಧದ ಉದ್ದೇಶಿತ ಶಿಸ್ತು ಕ್ರಮವನ್ನು ಕೈಬಿಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ, ಶ್ರೀ ಹೆಚ್.ಪಿ.ನಾಗರಾಜ, ತಹಶೀಲ್ದಾರ್ ಇವರ ವಿರುದ್ಧದ ದೋಷಾರೋಪಣೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 64 ಎಡಿಇ 2002, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಶ್ರೀ ಹೆಚ್.ಪಿ.ನಾಗರಾಜ, ಹಿಂದಿನ ತಹಶೀಲ್ದಾರ್, ಹೊಳಲ್ಕೆರೆ ತಾಲ್ಲೂಕು,ಚಿತ್ರದುರ್ಗ ಜಿಲ್ಲೆ,ಹಾಲಿ ತಹಶೀಲ್ದಾರ್, ರಾಣಿಬೆನ್ನೂರು ತಾಲ್ಲೂಕು,ಹಾವೇರಿ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಶ್ರೀ ಎಸ್.ಸಿ.ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.643, 10ನೇ ಮುಖ್ಯರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ವಿಚಾರಣೆ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/-(ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ(ಸಿ.ಸಿ.ಎ)ನಿಯಮಗಳು 1957ರ ನಿಯಮ 11 ಮತ್ತು 11-ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 287

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ:** ಶೈಕ್ಷಣಿಕ ಸಾಲಿನಿಂದ ಬೀದರ್‌ನ ಶ್ರೀ ದತ್ತಗಿರಿ ಮಹಾರಾಜ್ ಎಜುಕೇಷನ್ ಸೊಸೈಟಿಯ ಶ್ರೀ ದತ್ತಗಿರಿ ಮಹಾರಾಜ್ ಶಿಕ್ಷಣ (ಬಿ.ಎಡ್) ಕಾಲೇಜಿಗೆ ಸಂಯೋಜನೆ.

**ಓದಲಾಗಿದೆ:**

1. ದಿನಾಂಕ:9.1.2004, ಸಂಖ್ಯೆ: ಇಡಿ 256 ಯುಜಿವಿ 2003ರ ಸರ್ಕಾರಿ ಆದೇಶ.
2. ದಿನಾಂಕ:24.12.2005, ಸಂಖ್ಯೆ: F.SRO/NCTE/B.P.Ed/2005-06/4920 ರ ಎನ್.ಸಿ.ಟಿ.ಇ. ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.
3. ಶ್ರೀ ದತ್ತಗಿರಿ ಮಹಾರಾಜ್ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರ ದಿನಾಂಕ 6.1.2006ರ ಪತ್ರ

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ. ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ)ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ: 9.1.2004, ಸಂಖ್ಯೆ: ಇಡಿ 256 ಯುಜಿವಿ 2003ರ ಸರ್ಕಾರಿ ಆದೇಶದಲ್ಲಿ ಬೀದರ್‌ನ ಶ್ರೀ ದತ್ತಗಿರಿ ಮಹಾರಾಜ್ ಎಜುಕೇಷನ್ ಸೊಸೈಟಿಯು ಬೀದರ್‌ನಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ಶ್ರೀ ದತ್ತಗಿರಿ ಮಹಾರಾಜ್ ಶಿಕ್ಷಣ ಕಾಲೇಜಿನಲ್ಲಿ (ಬಿ.ಎಡ್) ಕೋರ್ಸನ್ನು 100 (ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ: 24.12.2005, ಸಂಖ್ಯೆ:

F.SRO/NCTE/B.P.Ed/2005-06/4921 ರ ಎನ್.ಸಿ.ಟಿ.ಇಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ದಿನಾಂಕ: 6.1.2006ರ ಪತ್ರದಲ್ಲಿ ಶ್ರೀ ದತ್ತಗಿರಿ ಮಹಾರಾಜ್ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರು ಸದರಿ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಅದಕ್ಕಾಗಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 10 ಯುಜಿಪಿ 2006, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1)(ಎ)ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೀದರ್‌ನ ಶ್ರೀ ದತ್ತಗಿರಿ ಮಹಾರಾಜ್ ಎಜುಕೇಷನ್ ಸೊಸೈಟಿಯ ಶ್ರೀ ದತ್ತಗಿರಿ ಮಹಾರಾಜ್ ಶಿಕ್ಷಣ (ಬಿ.ಎಡ್) ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 294

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಹಾವೇರಿಯ ಟಿ.ಎಂ.ಎ.ಇ. ಸೊಸೈಟೀಸ್ ಬಿ.ಪಿ.ಎಡ್. ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ:21.2.2004ರ ಸಂಖ್ಯೆ: ಇಡಿ 210 ಯುಆರ್‌ಸಿ 2003 ಸರ್ಕಾರಿ ಆದೇಶ.
2. ದಿನಾಂಕ:26.12.2005ರ ಸಂಖ್ಯೆ: F.SRO/NCTE/B.P.Ed/2005-06/4990 ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ: 27.12.2005ರ ಪ್ರಾಂಶುಪಾಲರು, ಟಿ.ಎಂ.ಎ.ಇ.ಎಸ್. ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್, ಹಾವೇರಿ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಹಾವೇರಿಯ ಟಿ.ಎಂ.ಎ.ಇ. ಸೊಸೈಟೀಸ್ ನ ಬಿ.ಪಿ.ಎಡ್ ಕಾಲೇಜಿಗೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 26.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ಪತ್ರದಲ್ಲಿ ಮೇಲ್ಕಂಡ ಕಾಲೇಜಿನ ಪ್ರಾಂಶುಪಾಲರು ಸದರಿ ಕಾಲೇಜಿನ ಬಿ.ಪಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 11 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹಾವೇರಿಯ ಟಿ.ಎಂ.ಎ.ಇ. ಸೊಸೈಟೀಸ್ ಬಿ.ಪಿ.ಎಡ್. ಕಾಲೇಜಿಗೆ 2005-2006ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 50 (ಐವತ್ತು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 295

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ನವೋದಯ ವೈದ್ಯಕೀಯ ಮಹಾವಿದ್ಯಾಲಯ, ರಾಯಚೂರು ಇವರಿಗೆ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಪ್ರಾಂಶುಪಾಲರು, ನವೋದಯ ವೈದ್ಯಕೀಯ ಮಹಾವಿದ್ಯಾಲಯ, ರಾಯಚೂರು ಇವರ ಪತ್ರ ಸಂಖ್ಯೆ: ಎನ್.ಎಂ.ಸಿ./ಆರ್.ಸಿ.ಆರ್./2005-06/1236, ದಿನಾಂಕ: 9.11.2005.
2. ಸರ್ಕಾರದ ಪತ್ರ ಸಂಖ್ಯೆ: ಆಕುಕ 398 ಎಂ.ಪಿ.ಎಸ್. 2005, ದಿನಾಂಕ: 29.11.2005.
3. ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ವೈಶಿನಿ/ಎಂಇಎಸ್/36/2005-06, ದಿನಾಂಕ: 8.2.2006.

**ಪ್ರಸ್ತಾವನೆ:**

1) ಮೇಲೆ ಓದಲಾದ (1)ರ ಪತ್ರದಲ್ಲಿ ರಾಯಚೂರಿನ ನವೋದಯ ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು ಅವರ ಕಾಲೇಜಿನ ಆಸ್ಪತ್ರೆಗೆ ಮರಣೋತ್ತರ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವಂತೆ ಕೋರಿದ್ದರು. ಮೇಲೆ ಓದಲಾದ (2)ರ ಪತ್ರದಲ್ಲಿ ಈ ಸಂಬಂಧ ಪರಿಶೀಲಿಸಿ ವರದಿ

ಸಲ್ಲಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಕೋರಿತ್ತು. ಮೇಲೆ ಓದಲಾದ (3)ರ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯದ ವಿದಿವೈದ್ಯ ಶಾಸ್ತ್ರ ವಿಭಾಗದ ಮುಖ್ಯಸ್ಥರಿಂದ ರಾಯಚೂರಿನ ನವೋದಯ ವೈದ್ಯಕೀಯ ಕಾಲೇಜಿನ ಆಸ್ಪತ್ರೆಯ ತಪಾಸಣೆ ನಡೆಸಿ, ಶವ ಪರೀಕ್ಷೆ ನಡೆಸಲು ಸದರಿ ಆಸ್ಪತ್ರೆಯಲ್ಲಿ ಎಲ್ಲಾ ಮೂಲಭೂತ ಸೌಲಭ್ಯಗಳು ಇರುವುದರಿಂದ ಸದರಿ ಆಸ್ಪತ್ರೆಯಲ್ಲಿ ಮರಣ ಉಂಟಾದರೆ ಮಾತ್ರ ಶವ ಪರೀಕ್ಷೆ ನಡೆಸಲು ಅನುಮತಿ ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

2) ಮೇಲ್ಕಂಡ ಶಿಫಾರಸ್ಸನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಮೇಲ್ಕಂಡ ವೈದ್ಯಕೀಯ ಕಾಲೇಜಿನ ಆಸ್ಪತ್ರೆಗೆ ಸದರಿ ಆಸ್ಪತ್ರೆಯಲ್ಲಿ ಮರಣ ಉಂಟಾದ ಸಂದರ್ಭದಲ್ಲಿ, ಆ ಶವಗಳ ಮರಣೋತ್ತರ ಪರೀಕ್ಷೆಯನ್ನು ನಡೆಸಲು ಅನುಮತಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 398 ಎಂಪಿಎಸ್ 2005, ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2006**

3) ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ರಾಯಚೂರಿನ ನವೋದಯ ವೈದ್ಯಕೀಯ ಕಾಲೇಜಿನ ಆಸ್ಪತ್ರೆಗೆ, ಸದರಿ ಆಸ್ಪತ್ರೆಯಲ್ಲಿ ಮರಣ ಉಂಟಾದ ಶವಗಳ ಮರಣೋತ್ತರ ಪರೀಕ್ಷೆಯನ್ನು ಮಾತ್ರ ನಡೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಿದೆ.

(1) ಮರಣೋತ್ತರ ಪರೀಕ್ಷೆಗಾಗಿ ಯಾವುದೇ ಶುಲ್ಕವನ್ನು ಮೃತರ ಕುಟುಂಬದಿಂದ ಅಥವಾ ಬಂಧುಬಾಂಧವರಿಂದ ವಸೂಲಿ ಮಾಡಬಾರದು.

(2) ಮರಣೋತ್ತರ ಶವ ಪರೀಕ್ಷೆಯ ನಂತರ ರಾಸಾಯನಿಕ ಪರೀಕ್ಷೆಗಳಿಗಾಗಿ ಆಯ್ದ ಭಾಗಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸುವುದು.

(3) ಕಾಲಕಾಲಕ್ಕೆ ಸರ್ಕಾರವು ನಿಗದಿಪಡಿಸಿದ ಆಸ್ಪತ್ರೆಯ ಕರ್ತವ್ಯದ ಅವಧಿಯಲ್ಲಿ ಆರಕ್ಷಕರಿಂದ ಪಂಚನಾಮೆ ನಡೆಸಿ ಮರಣೋತ್ತರ ಪರೀಕ್ಷೆ ನಡೆಸುವುದು.

(4) ಮರಣ ಕಾರಣ, ಇತ್ಯಾದಿ ಮರಣೋತ್ತರ ಪರೀಕ್ಷಾ ವರದಿಗಳನ್ನು ನಿಗದಿತ ಸಮಯದೊಳಗೆ ತಯಾರಿಸಿ, ಸಂಬಂಧಪಟ್ಟ ಆರಕ್ಷಕ ಠಾಣೆಗೆ ಸಲ್ಲಿಸುವುದು.

(5) ಮೆಡಿಕೋ ಲೀಗಲ್ ತಜ್ಞರ ಪ್ರಮಾಣ ಪತ್ರವನ್ನು (Expert Opinion) ಸದರಿ ಮಹಾವಿದ್ಯಾಲಯದ ವಿಧಿವೈದ್ಯಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ಹೊಂದಿದವರು ಮಾತ್ರ ನೀಡುವುದು.

(6) ಮರಣೋತ್ತರ ಶವ ಪರೀಕ್ಷೆಗೆ ಆಗುವ ಆರ್ಥಿಕ ಹೊರೆಯನ್ನು ಸರ್ಕಾರದಿಂದ ಭರಿಸಲಾಗುವುದಿಲ್ಲ.

(7) ಸಾಕ್ಷ್ಯಾಧಾರ ಒದಗಿಸುವ ಸಲುವಾಗಿ ನ್ಯಾಯಾಲಯಗಳಿಗೆ ಹಾಜರಾಗುವ ಸಂಬಂಧ ಯಾವುದೇ ಭತ್ಯೆಯನ್ನು ಸರ್ಕಾರ ಭರಿಸುವುದಿಲ್ಲ.

(8) ಶವ ಪರೀಕ್ಷೆ ನಡೆಸಿದ ತಜ್ಞರು ಉದ್ಯೋಗದಲ್ಲಿ ಮುಂದುವರೆಯದಿದ್ದರೂ ಸಹ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರ ನೀಡಲು ಹಾಜರುಪಡಿಸುವ ಜವಾಬ್ದಾರಿ ಸದರಿ ವೈದ್ಯಕೀಯ ಮಹಾವಿದ್ಯಾಲಯದ್ದಾಗಿರುತ್ತದೆ.

(9) ಮೆಡಿಕೊ ಲೀಗಲ್ ಪ್ರಕರಣಗಳಲ್ಲಿ ಕಾಯ್ದಿರಿಸಿದ ವಸ್ತುಗಳನ್ನು ವಿಧಿವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ವಿಶ್ಲೇಷಿಸಿ, ಅಭಿಪ್ರಾಯ ನೀಡುವ ಸಲುವಾಗಿ ಅಗತ್ಯವಾದ ಪ್ರಯೋಗಾಲಯವನ್ನು ಸ್ಥಾಪಿಸಿ, ಅದಕ್ಕೆ ರಾಷ್ಟ್ರೀಯ ಅಕ್ರಿಡೇಷನ್ ಮಾನ್ಯತೆಯನ್ನು ಹೊಂದತಕ್ಕದ್ದು.

(4) ಮೇಲ್ಕಂಡ ಷರತ್ತು ಮತ್ತು ನಿಬಂಧನೆಗಳಲ್ಲದೆ ಸರ್ಕಾರ/ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ/ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕಾಲಕಾಲಕ್ಕೆ ಹೊರಡಿಸುವ ಸ್ಥಾಯಿ ಆದೇಶಗಳನ್ನು/ಸೂಚನೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 296

**ತಿದ್ದುಪಡಿ ಸಂಖ್ಯೆ: ಆಕುಕ 140 ಎಂಎಂಸಿ 2005, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2006**

ದಿನಾಂಕ: 27.12.2005 ಸಂಖ್ಯೆ: ಆಕುಕ 140 ಎಂಎಂಸಿ 2005ರ ಸರ್ಕಾರಿ ಆದೇಶದ ಪ್ರಸ್ತಾವನೆಯ ಕಂಡಿಕೆ (4)ರ 9ನೇ ಸಾಲಿನ ಆವರಣಗಳಲ್ಲಿ "(ಎರಡು ಸಾವಿರದ ಹದಿಮೂರು ರೂಪಾಯಿಗಳು ಮಾತ್ರ)" ಎಂದು ನಮೂದಾಗಿರುವುದನ್ನು "(ಎರಡು ಸಾವಿರದ ಐದುನೂರ ಹದಿಮೂರು ರೂಪಾಯಿಗಳು ಮಾತ್ರ)" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 297

## ವಸತಿ ಸಚಿವಾಲಯ

**ವಿಷಯ:** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ಕೋಲಾರ ನಗರದ ಕೊಳಚೆ ಪ್ರದೇಶಗಳ ಉನ್ನತೀಕರಣ ಮತ್ತು ಅಭಿವೃದ್ಧಿಪಡಿಸುವ ಕಾಮಗಾರಿ ಕುರಿತು-ಮಂಡಳಿ ಅಧಿಕಾರ ವ್ಯಾಪ್ತಿ ಮೀರಿರುವ ವರ್ಕ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶಸಂಖ್ಯೆ: ವ ಇ 34 ಕೊಮಂಲೆ 2002 (1) ದಿನಾಂಕ: 13.05.2003 ಮತ್ತು 22.05.2003
2. ಆಯುಕ್ತರು, ಕಕೊನಿಮ ಇವರ ಪತ್ರ ಸಂಖ್ಯೆ: ಕಕೊನಿಮ/ ಆಯುಕ್ತರು/ನಿಜ್ಯೋ/ಕೋಲಾರ/2005-06/1062 ದಿನಾಂಕ:18.11.2005

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೋಲಾರ ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ. 133.56 ಲಕ್ಷಗಳ ಅಂದಾಜು ಪಟ್ಟಿಯಂತೆ ಕಾಮಗಾರಿಗಳನ್ನು ನಿರ್ವಹಿಸಲು ಅನುಮೋದಿಸಿದ್ದು, ವರ್ಕ್ ಸ್ಲಿಪ್ ಮೊತ್ತ ರೂ. 69.76 ಲಕ್ಷಗಳಿಗೆ ಹಾಗೂ EIRL ಮೊತ್ತ ರೂ.

